# ಕರ್ನಾಟಕ

# ಕಲಾಲ [ಸೂರ್ಯವಂಶ ಕ್ಷತ್ರಿಯ] ರು.



ಕಲಾಲ ಚೂಡಾಮಣಿರಾವ್.



ಬರೆಯಿರಿ:—

ಸೂರ್ಯವಂಶ ಕ್ಷತ್ರಿಯ ಸಮಾಜ, ಸಿಗ್ಗಾಂವ. (ಜಿ. ಧಾರವಾಡ)

ತಾ. ೩೦—೬—೪೬] [ಬೆಲೆ ೧—೦—೦

ಪ್ರಕಾಶಕರು—

**ಬಿ. ಫ. ಕಾಳೆ**

**ಶೇಷಾಚಲ ಗ್ರಂಥಮಾಲೆ**

ಮದಿಹಾಳ ೩೦೦ ಧಾರವಾಡ

ನಮ್ಮ ಮುಂದಿನ ಪುಸ್ತಕ—

“ ಕಲಾಲ ಸಮಸ್ಯೆಗಳು ”

ನಿರೀಕ್ಷಿಸಿರಿ

ಮುದ್ರಕರು—

**ಎಸ್. ಎಸ್. ಪಾಟೀಲ (ಮ್ಯಾನೇಜರ)**

**ಸದಾನಂದ ಮುದ್ರಣಾಲಯ**

**ಬ್ಯಾಡಗಿ.**

# ಮುಡಿಪು

ನಮ್ಮೆಲ್ಲರ ಹಿರಿಯರೂ, ಮಮತೆಯ ಮಾನವನವರೂ ಆದ

**ಮಹದೇವ ಪರಶುರಾಮ ವೀರಜಕರ.**

ಇವರಿಗೆ ಭಕ್ತಿಪೂರ್ವಕ **ಮುಡಿಪು.**

---

## ವಿ ಷ ಯ ಸೂ ಚಿ .

# ಅರಿಕೆ

ಇದೀಗ ಭಾರತದಲ್ಲಿ ಮಹಾವಿಪ್ಲವ ತಾಂಡವವಾಡುತಿದೆ. ಅದರ ತೆರೆಗಳು ಎಲ್ಲೆಲ್ಲೂ ಅಪ್ಪಳಿಸುತ್ತವೆ. ಹಾಗೆ ಈ ಸೂರ್ಯವಂಶ ಕ್ಷತ್ರಿಯರನ್ನು ಸಹ! ಪ್ರಗತಿಯ ಈ ಜಂಝೂವಾತಕ್ಕೆ ಕಲಾಲರೂ ಈಡಾಗಬೇಕು, ಹಾಗಾಗದಿದ್ದರೆ ಭಾವೀಕಾಲದಲ್ಲಿ ಇವರು ಜೀವವಿಲ್ಲದ ವಸ್ತುಗಳಂತೆ ಇಲ್ಲವೆ ಗುಲಾಮರಂತೆ ಇರಬೇಕಾದೀತು! ಅದ್ದರಿಂದಲೇ ಈ 'ಕಲಾಲರು' ಪುಸ್ತಕ ಬರೆಯಲ್ಪಟ್ಟಿದೆ ನಾನು ಸಾಹಿತ್ಯನಿರ್ಮಿಸಿ ಅನುಭವಪಡೆದವನಲ್ಲ. ಆದ್ದರಿಂದ ಈ ಕೃತಿ ಅಪೂರ್ಣವಿದೆ ಎಂದು ಬೇರೆ ಹೇಳಬೇಕಾಗಿಲ್ಲ.

ಕಲಾಲರೆಲ್ಲ ಸ್ವಾತಂತ್ರ್ಯ ಸೈನಿಕರಾಗಬೇಕೆಂಬ ಉದ್ದೇಶದಿಂದಲೇ ಕಲಾಲರು ರಾಣಾನ ಅನುಯಾಯಿಗಳೆಂದೂ ಮುಸ್ಲಿಂ ಕಲಾಲರು ಒತ್ತಾಯಕ್ಕೊಳಗಾದರೂ ಹಿಂದೂ ಧರ್ಮಬಿಡದವರೂ ಆದ ಇವರ ಚರಿತ್ರೆಯನ್ನು ತರ್ಕದಿಂದ ಐತಿಹಾಸಿಕ ಸಂಗತಿಗಳಿಗೆ ಹೊಂದಿಸಿದ್ದೇನೆ. ಹಿಂದೂ ಕಲಾಲರು ಮುಸ್ಲಿಂ (ಲಾಂಡೆ) ಕಲಾಲರು ಘಾಟ ಕಲಾಲರು ಚಾಕಣಾ ಕಲಾಲರು ಎಲ್ಲರೂ ಒಂದುಗೂಡಬೇಕೆಂದು ನನ್ನ ಹೆಬ್ಬಯಕೆ. ಅದನ್ನೇ ಈ ಪುಸ್ತಕದಲ್ಲಿ ಮನೋರಂಜನೆಯಾಗುವಂತೆ ಪ್ರಯತ್ನಿಸಿ ಬರೆದಿದ್ದೇನೆ. ಪ್ರತಿಯೊಬ್ಬ ಸೂರ್ಯವಂಶ ಕ್ಷತ್ರಿಯ (ಕಲಾಲ) ಬಂಧುವೂ ಇದನ್ನೋದಿ ಸಮಾಜೋದ್ಧಾರಕ್ಕಾಗಿ ಯತ್ನಮಾಡಬೇಕು. ಎಂದು ನನ್ನ ಪ್ರಾರ್ಥನೆ.

ಈ ಪುಸ್ತಕ ಬರೆಯುವಾಗ ನನಗೆ ನೆರವನ್ನಿತ್ತ ಸಿಡೇನೂರಿನ ಬಿ. ಡಿ. ಮುನಿಗೋಳ ಇವರನ್ನೂ ಅಮೌಲ್ಯ ಸಲಹೆಗಳನ್ನಿತ್ತ ಹುಲಕೊಪ್ಪದ (ಜಿ. ಧಾರವಾಡ) ಮೆಹತರಕರ ತುಕಾರಾಮಪ್ಪನವರನ್ನು ಮತ್ತು ಶಿರಾಳಕೊಪ್ಪದ ಎಸ್. ವೀರಪ್ಪ ಇವರ ಉಪಕಾರವನ್ನು ಮರೆಯಲಾರೆ.

ಈ ಪುಸ್ತಕದ ವೆಚ್ಚವಹಿಸಿದ ಸಿಗ್ಗಾಂವ ಸೂರ್ಯವಂಶ ಕ್ಷತ್ರಿಯ ಸಂಘವು ಒಂದು ಆದರ್ಶ ಸಂಘವಾಗಲೆಂದು ಹಾರೈಸುವೆ! ಈ ಪುಸ್ತಕದ ಮುನ್ನುಡಿ ಬರೆದುಕೊಟ್ಟ ಶ್ರೀ ಮಿರ್ಜಕರರ ಮತ್ತು ಪ್ರಕಾಶಕರಾದ ಶ್ರೀ ಕಾಳೆಯವರ ಹಾಗೂ ಸಕಾಲಕ್ಕೆ ಮುದ್ರಿಸಿಕೊಟ್ಟ ಸದಾನಂದ ಮುದ್ರಣಾಲಯದ ಬಳಗಕ್ಕೆ ಅಭಿವಂದನೆಗಳನ್ನರ್ಪಿಸುತ್ತೇನೆ. ನನ್ನಂತೆ ಸಮಾಜಸೇವೆಗೆ ಕಲಿತುಮುಂದೊರೆದ ತರುಣಕಲಾಲ ಬಂಧುಗಳಿಗೆಲ್ಲ ಕೈಮಾಡಿಕರೆಯುವೆನು.

**ಹೊಸಸಿಡೇನೂರ.**
**ತಾ. ೨೦-೬-೪೬**

**ಕಲಾಲರ ಸೇವಕ**
**ಕಲಾಲ ಚೂಡಾಮಣಿರಾವ್**

# ಒಂದು ಮಾತು

ಶ್ರೀ ಕಲಾಲ ಚೂಡಾಮಣಿಯವರು ಬರೆದಿರುವ "ಕರ್ನಾಟಕದ ಕಲಾಲರು" ಎಂಬ ಸೂರ್ಯವಂಶಿ ಕ್ಷತ್ರಿಯರ ಈ ಪುಸ್ತಕಕ್ಕೆ ನಾನು ಹೃತ್ಪೂರ್ವಕ ಸ್ವಾಗತ ಬಯಸುತ್ತೇನೆ. ಹಿಂದೂ ಸಮಾಜದ ಅನೇಕ ಅಂಗಗಳಲ್ಲಿ ಈ ಸೂರ್ಯವಂಶಿ ಕ್ಷತ್ರಿಯರೂ ಒಂದು ಅಂಗ. ಕರ್ನಾಟಕದಲ್ಲಿ ಅತಿಅಲ್ಪಸಂಖ್ಯಾಕ ಮತ್ತು ಅತಿಹಿಂದುಳಿದ ಸಮಾಜವೆಂದರೆ ಇದೊಂದೇ ಎಂದು ಎದೆತಟ್ಟಿ ಹೇಳಬಹುದು. ಈಹಿಂದೆ ನಾವು ಕಲಘಟಗಿಯಲ್ಲಿ ಸಮಾಜದ ಉನ್ನತಿಗಾಗಿ ಕರ್ನಾಟಕ ಸೂ ಕ್ಷತ್ರಿಯಸಂಘ ಸ್ಥಾಪಿಸಿದೆವು. ಆದರೆ ನಮ್ಮಸಮಾಜವ ದುರ್ದೈವದಿಂದ ಆ ಕೆಲಸವುನಿಂತುಹೋಗಿದೆ.

ಸುಮಾರು ೨೦ ವರ್ಷಗಳ ನಮ್ಮ ಜೀವನದಲ್ಲಿ ನಮ್ಮ ದೇಶದಲ್ಲಿ ಎಷ್ಟು ಬದಲಾವಣೆಯಾಗಿದೆ. ಲಿಂಗಾಯತರು, ಕುರುಬರು, ಹರಿಜನರು, ಮುಸಲ್ಮಾನರು ಮುಂತಾದವರು ವೇಗವಾಗಿ ಮುಂದೆಸಾಗಿ ದೇಶದ ರಾಜಕೀಯ ಜೀವನದಲ್ಲಿ ಹೊಂದಿಕೊಂಡಿದ್ದಾರೆ. ಆದರೆ ಈ ಸೂರ್ಯವಂಶಿ ಕ್ಷತ್ರಿಯರು ಜೀವಂತ ಪ್ರೇತಗಳೋಪಾದಿಯಲ್ಲಿ ಬಾಳು ಸಾಗಿಸುತ್ತಿದ್ದಾರೆ. ದಿವಂಗತ ಗಂಗಾಜಿ ಹೀರಾಜಿ ಭಡಂಗಾರರ ಕಣ್ಮರೆಯಾಗಿ ಇವರನಂತರ ನಮ್ಮಸಂಘದ ಕಾರ್ಯವು ಅವರ ಚಿಂತೆಯಿಂದ ನಿಂತುಹೋಯಿತು. ಅದನ್ನು ಉಳಿದವರ ಕೈಗೊಪ್ಪಿಸುವ ನಮ್ಮ ಕರ್ತವ್ಯವನ್ನು ನಾವು ಮರೆತು ಸಮಾಜಕ್ಕೆ ದ್ರೋಹ ಮಾಡಿದ್ದೇವೆ!

ನಮ್ಮ ಸಮಾಜದ ಸ್ಥಿತಿಯು ಎಷ್ಟು ಶೋಚನೀಯವಾಗಿಬಿಟ್ಟಿದೆ ಎಂಬುವದನ್ನು ಗ್ರಂಥಕರ್ತರು ಒಳ್ಳೇ ಉಜ್ವಲ ಶೈಲಿಯಲ್ಲಿ ಎದೆಕರಗಿ ನೀರಾಗಿ ಪ್ರತಿಯೊಬ್ಬರೂ ಕರ್ತವ್ಯಮುಖರಾಗುವಂತೆ ಬರೆದಿದ್ದಾರೆ ಪಂಗಡಗಳು. ಪ್ರಗತಿಗಾಗಿಆಶೆ, ಸಮಸ್ಯೆಗಳು, ಪರಿಹಾರ, ಹೊಸನೋಟ ಈ ವಿಭಾಗಗಳು ಒಳ್ಳೆ ವಿಚಾರಣೀಯವಿವೆ. ಅವುಗಳನ್ನು ಚನ್ನಾಗಿ ಅಭ್ಯಾಸ ಮಾಡಿ ಕಾರ್ಯಪ್ರವೃತ್ತರಾಗುವದು ನಮ್ಮೆಲ್ಲರಿಗೆ ಅತಿ ಅಗತ್ಯವಾಗಿದೆ.

ತರುಣ ಕಲಾಲ ಚೂಡಾಮಣಿಯವರು ಕೇವಲ ಸಮಾಜ ಸೇವೆ ಮಾಡಬೇಕೆಂಬ ಘನವಾದ ಉದ್ದಿಶ್ಯದಿಂದಲೇ ಅವರು ಪವಿತ್ರವಾದ ಶಿಕ್ಷಕ ಕಾರ್ಯವನ್ನು ಕೈಕೊಂಡಿದ್ದಾರೆ. ಈ ಗ್ರಂಥವು ಅವರ ಉದ್ದಿಶ್ಯದ ಉಜ್ವಲತೆ ಹೇಗಿದೆ ಎಂಬುದನ್ನು ಸಾರಿಸಾರಿ ಹೇಳುತ್ತದೆ.

ಈ ಗ್ರಂಥವು ಕುಂಭಕರ್ಣನಿದ್ರೆಯೋಪಾದಿಯಲ್ಲಿ ಮಲಗಿರುವ ನಮ್ಮ ಸಮಾಜಕ್ಕೆ ತಣ್ಣೀರೆರಚಿ ಎಚ್ಚರವನ್ನುಂಟುಮಾಡಿದೆ. ಈ ಕೆಲಸ ಮಾಡಿದ್ದಕ್ಕಾಗಿ ಕರ್ನಾಟಕ ಸೂರ್ಯವಂಶಿ ಕ್ಷತ್ರಿಯ ಸಂಘ (ಅದು ಈಗ ಸ್ತಬ್ಧವಾಗಿದೆ) ದ ಪತಿಯಿಂದ ಲೇಖಕರ ಆಭಾರ ಮನ್ನಿಸುತ್ತೇನೆ.

ನಮ್ಮ ಸಮಾಜದಲ್ಲಿ ಕಲಿತವರು ಇದೀಗ ಬೆಳಕಿನಲ್ಲಿ ಬಂದಿದ್ದರೂ ಚೂಡಾಮಣಿಯವರಂತೆ ಸಮಾಜ ಸುಧಾರಣೆಗಾಗಿ ಹೊಸಹಾದಿಯಲ್ಲಿ ಯಾರೂ ಪ್ರವೇಶಮಾಡುವ ಧೈರ್‍ಯಮಾಡಿಲ್ಲ. ಉಳಿದ ತರುಣರು ಧಿಟ್ಟ ತನದಿಂದ ಈ ಆದರ್ಶತೆಯನ್ನು ಕಣ್ಣೆದುರಿಗಿಟ್ಟುಕೊಂಡು ಸಮಾಜ ಸುಧಾರಣೆಗಾಗಿ ಪ್ರಯತ್ನಿಸಿದರೆ ಪುಸ್ತಕಕರ್ತೃರ ಹೊಸನೋಟದ ಕನಸುಗಳು ನನಸಾಗಿ ಅತ್ಯಲ್ಪಕಾಲದಲ್ಲೀ ನಮ್ಮ ಸಮಾಜವು ಮಲ್ಲಿಗೆಯ ಬನವಾದೀತೆಂದು ಹೇಳಬಯಸುತ್ತೇನೆ

ಇದು ಸಾಹಿತಿಗಳ ಕಲಾಕೃತಿಗಳ ಪಂಕ್ತಿಯಲ್ಲಿ ನಿಲ್ಲಲಿ ನಿಲ್ಲದಿರಲಿ ನಮ್ಮ ಸೂರ್ಯವಂಶಿ ಕ್ಷತ್ರಿಯ ಸಮಾಜಕೆ ಮಾತ್ರ ಇದು ಕೈಗನ್ನಡಿಯಾಗಿದೆ. ಗ್ರಂಥಕರ್ತರು ಮುಂದಿನಕೆಲಸಗಳೆಲ್ಲ ಕರ್ನಾಟಕ ಸೂರ್ಯವಂಶಿ ಕ್ಷತ್ರಿಯ ಸಂಘದ ಮುಖಾಂತರವೇ ಸಾಗಬೇಕೆಂದು ಒತ್ತಿಒತ್ತಿ ಹೇಳಿದ ಮಾತು ಯೋಗ್ಯವಾಗಿದೆ. ಆದ್ದರಿಂದ ಆ ಸಂಘದ ಕಾರ್ಯಾಧ್ಯಕ್ಷರಾದ ಶ್ರೀ ಮಾನಸೀರಾಜಿ ಮುರಗಾಜಿ ಭಡಂಗಕರ (ಸಾ. ಕಲಘಟಗಿ) ರವರು ಬೇಗನೆ ಕಾರ್ಯನಿರ್ವಾಹಕ ಸಮಿತಿಯ ಸಭೆ ಕರೆದು ಸಂಘವನ್ನು ಪುನರ್ಘಟನೆಮಾಡಿ ಅದರ ಸೂತ್ರಗಳನ್ನು ಹುರುಪಿನ ತರುಣರಿಗೆ ಒಪ್ಪಿಸುವ ಕೆಲಸವನ್ನು ತಡವಿಲ್ಲದೆ ಮಾಡಬೇಕಾಗಿದೆ.

ಕೊನೆಯದಾಗಿ ಈ ಪುಸ್ತಕದ ವೆಚ್ಚವಹಿಸಿದ ಸಿಗ್ಗಾಂವ ಸೂರ್ಯವಂಶಿ ಕ್ಷತ್ರಿಯ ಸಂಘವು ಮತ್ತು ಈ ಪುಸ್ತಕದ ಪ್ರಕಾಶಕರಾದ ಶ್ರೀ ಮ. ರಾ ಬಿ ಫ. ಕಾಳೆಯವರೂ ನಮ್ಮ ಸಮಾಜದ ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ.

ಲೇಖಕರ ಪವಿತ್ರ ಕಾರ್ಯಕ್ಕೆ ಸಹಾನುಭೂತಿ ತೋರಿಸಿ ಪ್ರತಿಯೊಬ್ಬ ನಮ್ಮ ಸಮಾಜ ಬಂಧುವು ಈ ಪುಸ್ತಕವನ್ನು ಕೊಂಡು ಓದಿ ಅರಗಿಸಿಕೊಂಡು ಗ್ರಂಥಕಾರರು ಹುರುಪಿನಿಂದ ಮತ್ತೆ ಹೊಸಕೃತಿಯನ್ನು ತರುವಂತೆ ಪ್ರೋತ್ಸಾಹಿಸಬೇಕೆಂದು ಹೇಳಬಯಸುತ್ತೇನೆ. ಕಾರಣ ಪ್ರತಿಯೊಬ್ಬರೂ ಈ ಪುಸ್ತಕವನ್ನು ಅಭ್ಯಾಸಿಸಿ ನಮ್ಮ ಶೋಚನೀಯ ಬಾಳಿಗೆ ಒಂದು ಗತಿಯನ್ನು ತಂದುಕೊಳ್ಳಬೇಕಾಗಿ ಬೇಡುವೆನು

**ನಮಸ್ತೆ**

ತಮ್ಮ

**ಸಮಾಜಸೇವಕ**

**ಶಿಗ್ಗಾಂವ ಪರಶುರಾಮ ಮೇಲಗಿರಿರಾವ ಮಿರಜಕರ**

# ಇವರಾರು.

ಬಾಬರನು ಸ್ಥಾಪಿಸಿದ ಮೊಗಲ ರಾಜ್ಯವನ್ನು ಅಕಬರನು ಸಾಮ್ರಾಜ್ಯವನ್ನಾಗಿ ಪರಿವರ್ತಿಸಿದ್ದಾನೆ. ರಜಪೂತ ಅರಸರನ್ನು ಸೋಲಿಸಿ ಅವರನ್ನು ಮಾಂಡಲಿಕರನ್ನಾಗಿ ಮಾಡಿದ್ದಾನೆ. ರಜಪೂತರ ಎಷ್ಟೋ ಕನ್ನೆಯರನ್ನು ಕಾಣಿಕೆಯಾಗಿ ಸ್ವೀಕರಿಸಿದ್ದಾನೆ. ಪಂಡಿತರು, ಕವಿಗಳು, ತತ್ವಶಾಸ್ತ್ರಜ್ಞರು, ರಾಜನೀತಿನಿಪುಣರು ಶೂರರು ಅಕಬರನಲ್ಲಿ ಆಶ್ರಯಿಸಿದ್ದಾರೆ. ಭಾರತದ ತುಂಬಾ ಆತನ ಕೀರ್ತಿಮೊಳಗುತಿದೆ; ಆದರೆ! ಆ ಸಾಮ್ರಾಟನಿಗೆ ಶಾಂತಿ ಯಿಲ್ಲ ಮೇವಾಡದ ರಾಣಾಪ್ರತಾಪನನ್ನು ತನ್ನ ಮಾಂಡಲಿಕನನ್ನಾಗಿ ಮಾಡಿಕೊಳ್ಳುವ ಹುಚ್ಚು ಆವನಿಗೆ ಹತ್ತಿದೆ. ಅದಕ್ಕಾಗಿ ತನ್ನ ಚತುರಂಗ ಬಲದ ಸೈನಿಕರನ್ನು ಸೇನಾಪತಿಗಳನ್ನು ಪಣಕ್ಕೆ ಹಚ್ಚಿ ಚಿತ್ತೂರ ಕೋಟೆಯನ್ನು ಮಾತ್ರ ಸೆಳೆದುಕೊಂಡಿದ್ದಾನೆ. ಆದರೇನು ಮಹಾರಾಣಾನು ಸೋಲಲೊಲ್ಲ; ಸೆರೆಯಾಗಲೊಲ್ಲ; ಅದಕ್ಕಾಗಿ ಈ ಕಿಚ್ಚು ಈ ಕಾಳಗ.

ರಾಣಾನು/ಕೂಡ ತನ್ನ ನಾಡಿನ ಸ್ವಾತಂತ್ರ್ಯಕ್ಕಾಗಿ ಪಡಲಾರದ ಕಷ್ಟ ಪಟ್ಟಿದ್ದಾನೆ. ಇಂದು ದೇವರೆಂದು ಪೂಜೆ ಗೊಳ್ಳುವ ಶ್ರೀರಾಮಚಂದ್ರನು ತನ್ನ ತಂದೆಯ ಆಜ್ಞಾ ಪಾಲನಕ್ಕಾಗಿ ಹದಿನಾಲ್ಕು ವರ್ಷ ದಾಯಾದಿಗಳ ಸ್ವಾರ್ಥಕ್ಕಾಗಿ ಪಾಂಡವರು ಹನ್ನೆರಡು ವರ್ಷ ವನವಾಸವನ್ನನುಭವಿಸಿದ್ದರೆ, ಈ ಮಹಾವೀರನು ಇಪ್ಪತ್ತೈದುವರ್ಷ ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಕಾಡು ಸೇರಿದ್ದಾನೆ. ಭೂಮಿಯಲ್ಲಾ ಹಾಳಾಗಿದೆ. ವರ್ತಕ ಕೂಲಿಕಾರರು ಹಾನಿಗೊಳಗಾಗಿದ್ದಾರೆ. ಮೇವಾಡದ ಎಷ್ಟೋ ರಮ

ಣಿಯರು ಜೋಹಾರ ಮಾಡಿದ್ದಾರೆ. ರಾಣಾನು ರಾಜ್ಯ ಸಂಪತ್ತು ಸೈನಿಕರನ್ನು ಕಳೆದುಕೊಂಡು ವನವಾಸಿಯಾಗಿದ್ದಾನೆ ಹೊಟ್ಟೆಗೆ ಗತಿಇಲ್ಲದೆ ತಿರುಕನಂತೆ ಹೆಂಡರು ಮಕ್ಕಳೊಡನೆ ಕಾಲಕಳೆಯುತ್ತಿದ್ದಾನೆ ಬೇಕುಬೇಕಾದ ಸುಖ ವಿಲಾಸವನ್ನನುಭವಿಸಿದ್ದ ಅವನು ಇಂದು ಒಂದು ತುತ್ತು ರೊಟ್ಟೆಯನ್ನು ಕೂಡ ಕಾಣದಾಗಿದ್ದಾನೆ.

ಒಂದು ದಿನ ಕತ್ತಲೆಯರಾತ್ರಿ ಎಲ್ಲಲ್ಲೂ ಸ್ಥಬ್ಧತೆ ತುಂಬಿದೆ ಅರವಲೀ ಬೆಟ್ಟದ ಒಂದು ಭಾಗದ ಒಂದು ಹಾಳು ದೇಗುಲದಲ್ಲಿ ಒಳಗೆ ಇಬ್ಬರು ಸರದಾರರು ರಾಣಾನೊಡನೆ ಚರ್ಚಿಸುತ್ತಿದ್ದಾರೆ.

ಅವರಲ್ಲಿ ಒಬ್ಬನು ಮಹಾರಾಜ ನಾವು ಅಕಬರನ ಕೈ ಗೊಂಬೆಯಾದ ನಮ್ಮ ಅರಸನಲ್ಲಿ ಇರಲಾರೆವು. ಅದಕ್ಕಾಗಿ ತಮ್ಮಲ್ಲಿ ಆಶ್ರಯಕ್ಕಾಗಿ ಬಂದಿದ್ದೇವೆ ಮೇವಾಡದ ಸ್ವಾತಂತ್ರ್ಯ ಸೂರ್ಯರಾದ ತಾವು ನಮ್ಮನ್ನೂ ನಮ್ಮ ಕುಟುಂಬಗಳನ್ನೂ ಹೆಚ್ಚೇನು ನಮ್ಮ ವಂಶದ ಮಾನವನ್ನೂ ಕಾಪಾಡುವ ಭಾರವು ತಮ್ಮನ್ನು ಕೂಡಿದೆ. ಎಂದು ತಮ್ಮ ಚರ್ಚೆಯ ಕೊನೆಯ ಬೇಡಿಕೆಯನ್ನು ಅರಿಕೆ ಮಾಡಿಕೊಂಡನು.

ಆಗ ರಾಣಾನು ಉಸಿರು ಹಾಕಿ ಸರದಾರರೇ ನಿಮ್ಮ ಸ್ವಾಭಿ ಮಾನಕ್ಕಾಗಿ ನನಗೆ ತುಂಬಾ ಹೆಮ್ಮೆ ಆದರೇನು ನನ್ನ ರಾಜ್ಯವು ಶತ್ರುಗಳ ಕೈ ಸೇರಿದೆ. ಉದಾತ್ತ ವಾದ ವೀರರು ಕಾಳಗದಲ್ಲಿ ಮಡಿದಿದ್ದಾರೆ. ನನ್ನಲ್ಲಿ ಧನವಿಲ್ಲ ಸಾಕಷ್ಟು ಬೆಂಬಲವಿಲ್ಲ. ಈ ಪ್ರಸಂಗದಲ್ಲಿ ನಾನು ಅಕಬರನೊಡನೆ ಹೇಗೆ ಹೋರಾಡಬೇಕು ಈ ಯೋಚನೆಯೇ ಈಗ ಬಲವಾಗಿದೆ. ಆದಕಾರಣ ನಾನು ನಿಮಗೆ ಯಾವರೀತಿಯಿಂದ ಆಶ್ರಯ ಸಲ್ಲಿಸಲಿ.

ಸ್ವಲ್ಪ ಕಾಲ ಎಲ್ಲವೂ ಮೌನ ನಂತರ ಸರದಾರನು ರಾಜಾಧಿರಾಜ ಹಾಗಾದರೆ ನಾವು ನಮ್ಮ ವಂಶ ಗೌರವಕ್ಕಾಗಿ ಈ ನಾಡನ್ನು ಬಿಟ್ಟು ಹೋಗಬೇಕಾಗುವದು. ಇನ್ನು ನಾವು ನಮ್ಮ ಮಾತೃಭೂಮಿಯಿಂದ ದೂರಹೋಗಬೇಕಾಗುವದು. ಸುಖವಿಲಾಸ ಗಳಿಗಾಗಿ ತಮ್ಮ ಹೆಂಗಳೆಯರನ್ನು ಯವನರಿಗೆ ಬಲಿಕೊಡುವ ಸ್ವಾಭಿಮಾನ ಶೂನ್ಯರಾದ ನಿರ್ಲಜ್ಜ ಅರಸರಲ್ಲಿ

ಇರಲಾರೆವು. ಆದ್ದರಿಂದ ನಾವು ನಮ್ಮ ಹೆಂಡರು ಮಕ್ಕಳು ಇಷ್ಟ ಮಿತ್ರರು ಬಂಧುಬಾಂಧವರೊಡನೆ ಎಲ್ಲಿಯಾದರೂ ಹೋಗಿ ಕಾಲಕಳೆಯುವೆವು. ಇಲ್ಲಿದ್ದುಕೊಂಡು ನಮ್ಮ ಮಾನವನ್ನು ಮೊಗಲೆಯರನ್ನು ಮಾರಿಕೊಳ್ಳಲಾರೆವು. ಅದಕ್ಕಾಗಿ ನಮಗೆ ಆಶೀರ್ವಚನಗಳಿಂದ ಅಪ್ಪಣೆ ಕೊಡಬೇಕು ಎಂದು ಆ ಸರದಾರನು ಬಿನ್ನವಿಸುತ್ತಲೇ ರಾಣಾನ ಕಂಠವು ಬಿಗಿದು ಕಂಪಿತಸ್ವರದಿಂದ ಹೀಗೆ ಹೇಳಿದನು. ಮಾತೃ ಭೂಮಿಯ ಸ್ವಾತಂತ್ರ್ಯಕ್ಕಾಗಿ ಹೋರಾಡುವ ನಾನು ನಿಮಗೆ ಈ ಭೂಮಾತೆಯನ್ನು ತೊರೆದುಹೋಗಿರೆಂದು ಹೇಗೆ ಹೇಳಲಿ; ಹಾಯ್ ನಿರ್ ಭಾಗ್ಯ ರಾಣಾ ನಿನ್ನ ಇರುವಿಕೆವ್ಯರ್ಥ; ಎಂದು ಕಣ್ಣೀರು ಸುರಿಸಿ ನಂತರ ಹೀಗೆ ಹೇಳಿದನು. ಗುಲಾಮರಾಗಿ ಸ್ವಾತಂತ್ರ್ಯವನ್ನೂ ಹೇಡಿಗಳಾಗಿ ಮಾನವನ್ನೂ ಕಳೆದುಕೊಂಡು ಇಲ್ಲಿ ಬಾಳುವದಕ್ಕಿಂತಲೂ ಪರದೇಶದಲ್ಲಿ ಪರದೇಶಿಗಳಾಗಿ ನಮ್ಮ ಕ್ಷಾತ್ರ ಕುಲಕ್ಕೆ ತಕ್ಕಂತೆ ಎಂಥ ಪ್ರಸಂಗ ಬಂದರೂ ಹೆದರದೆ ಬಾಳಿರಿ. ಅನುಕೂಲ ಕಾಲ ಬಂದಾಗ ಮತ್ತೆ ನಿಮ್ಮನ್ನು ತಾಯಿನಾಡಿಗೆ ಬರಮಾಡಿ ಕೊಳ್ಳುತ್ತೇನೆ. ತಕ್ಕೊಳ್ಳಿ ಆಶ್ವಾಸನವೆಂದು ರೋಷಯುಕ್ತ ಖಿನ್ನ ಮನಸ್ಕನಾಗಿ ಹೇಳಿದನು.

ಅವರು ತಮ್ಮ ವಾಸಸ್ಥಾನಕ್ಕೆ ಬಂದು ಹೊರಡುವ ಸಿದ್ಧತೆ ನಡಿಸಿದರು ಮೂರನೇ ರಾತ್ರಿ ಆ ನಗರದಲ್ಲಿ ಎಲ್ಲರೂ ನಿದ್ರಾವಶರಾಗಿದ್ದಾರೆ ಇಂಥ ಅನುಕೂಲ ಕಾಲದಲ್ಲಿ ಆ ಸರದಾರರೆಲ್ಲರೂ ತಮ್ಮ ಪರಿವಾರದೊಡನೆ ತಮ್ಮ ಮನೆ ಮಂದಿರಗಳನ್ನು ತೊರೆದು ಎಲ್ಲಿಗೆ ಯಾತಕ್ಕೆ ಎಂಬ ಕಲ್ಪನೆಯಿಲ್ಲದೆ ರಜಪೂತಸ್ಥಾನದ ದಕ್ಷಿಣದ ಅಡವಿಯ ಹಾದಿಯಲ್ಲಿ ತರಗೆಲೆಯ ಸರಕ್ ಎಂಬ ಸಪ್ಪಳಕ್ಕೂ ಬೆಚ್ಚುತ್ತ ಸಾಗಿದ್ದಾರೆ ಹೀಗೆ ಸಾಗಿದಾಗಲೇ ಆ ವೇದನಾಯುಕ್ತ ಹೃದಯಿಗಳು ಏನೋ ನೆನಪಾಗಿ ಹಿಂತಿರುಗಿ ನೋಡಿದರು ಆ ಕತ್ತಲೆಯಲ್ಲಿ ಅವರ ನಗರವು ಮಸಕು ಮಸಕಾಗಿ ಕಾಣುತ್ತಿತ್ತು. ಈ ವರೆಗೆ ತಮಗೆ ಸಂಬಂಧವಿದ್ದ ಈ ನಗರಕ್ಕೂ ತಮಗೂ ಇದ್ದ ಸಂಬಂಧವು ಕಳಚುತ್ತಿದೆಯಲ್ಲಾ ಎಂದು ಮರುಗಿದರು. ಈ ನಗರ ಈಗ ಬಿಡುತ್ತಿರುವ ಈ ನಾಡು ನಮ್ಮದಲ್ಲ ವಾಗುತ್ತಿದೆಯಲ್ಲಾ ಎನಿಸಿ ಅತಿದುಃಖವಾಯಿತು. ನಿರ್ವಾಹವಿಲ್ಲದೆ ಅವರು ಹೆಜ್ಜೆ ಇಕ್ಕುತ್ತಾ ಮತ್ತೆ ತಿರುತಿರುಗಿ

ತಮ್ಮವಾಗಿದ್ದ ಸೌಧಗಳನ್ನು ನೋಡುತ್ತ ಸಾಗುತ್ತಿದ್ದಾರೆ. ಅವರ ಹೃದಯದಲ್ಲೀಗ ಬಗೆಬಗೆಯ ವಿಕಾರಗಳು ತಾಂಡವವಾಡುತ್ತಿದ್ದವು ಅವುಗಳನ್ನು ತಡೆಯಲು ಎತ್ನಿಸಿದಷ್ಟು ಅವು ಹೆಚ್ಚಾಗುತ್ತಿದ್ದವು ಈಗ ಅವರಕಣ್ಣೆದುರು ಗತಕಾಲದ ಒಂದೊಂದೇ ಚಿತ್ರಗಳು ಹಾಯ್ದು ಹೋಗಹತ್ತಿದವು.

ತಾವು ಸಣ್ಣವರಿದ್ದಾಗಿನ ಹಟ ತಾಯಿತಂದೆಗಳ ಅಚ್ಚಿ ಗೆಳೆಯರೊಡನೆ ಸಲ್ಲಾಪ ಜಗಳಗಳು ಆಟ ನೋಟಗಳು ತಮ್ಮ ಯೌವನದಲ್ಲಿ ಮಾಡಿದ ಸಾಹಸಗಳು ತಮ್ಮ ಮನಸ್ಸಿಗೆ ಬಂದ ಸುಂದರಿಯರೊಡನೆ ವಿವಾಹವಾಗಿ ಇಷ್ಟ ಸುಖಗಳನ್ನನುಭವಿಸಿದ್ದು ಮಕ್ಕಳನ್ನು ಪಡೆದು ಭಾಗ್ಯವಂತರಾದದ್ದು ಮುಂದೆ ಅಕಬರಬಾದಶಹನೊಡನೆ ನಡೆದ ಯುದ್ಧ ವೈರಿಗಳಕೂಡ ಜೀವದಾಸೆಯಿಲ್ಲದೆ ಕಾದಿ ಅನೇಕ ಜನ ಶೂರರನ್ನು ಹೊಡೆದದ್ದು ಕೊಂದದ್ದು ಗೆದ್ದದ್ದು ಸಂತೋಷ ಉಕ್ಕಿ ಹಾರಾಡಿದ್ದು ಕೊನೆಗೆ ತಮ್ಮವರು ಹತಾಶರಾಗಿ ಮಡಿದಾಗ ಸ್ತ್ರೀಯರು ಜೋಹಾರು ಮಾಡಿದ್ದು ತಮ್ಮಕಲಿತನಕ್ಕಾಗಿ ಮಹಾರಾಣಾನಿಂದ ಹೊಗಳಿಕೆಯ ಪತ್ರ ಬಂದದ್ದು ಕೊನೆಗೆ ವೈರಿಗಳು ಮತ್ತೆ ಮುತ್ತಿಗೆ ಹಾಕಿದ್ದು ಮೋಸದಿಂದ ಮಾನಸಿಂಹನು ಅಕಬರನೊಡನೆ ಒಪ್ಪಂದ ಮಾಡಿಸಿದ್ದು ಕೋಟೆಯನ್ನು ಬಿಟ್ಟು ಕೊಟ್ಟದ್ದು ಎಷ್ಟೋ ಜನ ಸುಂದರಿಯರನ್ನು ಅಕಬರನಿಗೆ ಕಾಣಿಕೆಯಾಗಿ ಒಪ್ಪಿಸಿದ್ದು ಯುದ್ಧವು ನಿಂತದ್ದು ಹೀಗೆ ಒಂದೊಂದೇ ಚಿತ್ರಗಳು ಹಾದು ಹೋದವು. ಆಗ ಅವರ ಮನಸ್ಸಿನಲ್ಲಿ ಕಲ ಕಲ ವೆದ್ದಿತು. ಒಬ್ಬರನ್ನೊಬ್ಬರು ಅಪ್ಪಿ ದುಃಖಿಸಿದರು. ಇಷ್ಟೆಲ್ಲ ಕಷ್ಟ ಅನುಭವಿಸಿ ಕೊನೆಗೆ ತಮ್ಮ ತಾಯಿನಾಡನ್ನು ಪರಕೀಯರ ಕೈಯಲ್ಲಿ ಕೊಟ್ಟು ಹೋಗಬೇಕಾಯಿತಲ್ಲ ಎಂದು ಅವರಿಗೆ ಕರುಣೆಯಿಂದ ಕಳವಳವಾಯಿತು. ಮಾತೃಭೂಮಿಗಾಗಿ ಸಹಾನು ಭೂತಿಯಾಗಿ ಜನ್ಮಭೂಮಿಯನ್ನು ತೊರೆದು ಹೋಗುವ ನಿರ್ಧಾರವು ತಡೆಯದಂತಾಯಿತು. ಅವರು ಇನ್ನೂ ಕೆಲ ಕಾಲ ಈ ವಿಚಾರದಲ್ಲೇ ಇದ್ದಿದ್ದರೆ ಅವರು ತಿರುಗಿ ತಮ್ಮ ಪಟ್ಟಣವನ್ನೇ ಸೇರುತ್ತಿದ್ದರು. ಆದರೆ ಯಾವ ಮನಸ್ಸು ಹಿಂದಿನ ಎಲ್ಲ ನೆನಪುಗಳನ್ನು ಮೂಡಿಸಿತ್ತೋ ಅದೇ ಮನಸ್ಸು ತಮ್ಮ ದುಸ್ಥಿತಿಯ ಭಯಂಕರತೆಯನ್ನೂ ಕಣ್ಣೆದುರು ತಂದಿತು. ಆ ಪಾರತಂತ್ರ್ಯ ತಮ್ಮ

ಸುವಾಸಿನಿಯರನ್ನು ದಾನ ಮಾಡುವದು ನಿರ್ಲಜ್ಜತೆ ನಿರಾಸೆ ನಿಸ್ಸತ್ವ ಜೀವನ್ಮೃತ ಜೀವನ ಈ ಕಲ್ಪನೆಗಳು ಮೂಡಿ ಮಾತೃ ಭೂಮಿಗೆ ತಿರ್ತಗುವ ವಿಚಾರವು ನಿಂತುಹೋಗಿ ಮನದಲ್ಲಿ ಸ್ವಾಭಿಮಾನದ ಪ್ರಚಂಡ ಶಕುಯು ಭೋರ್ಗರೆಯ ಹತ್ತಿ ಕುಣಿಯುತ್ತಿರುವ ತಾಯಿನಾಡಿನ ಪ್ರೀತಿಯನ್ನು ಕೊಚ್ಚಿಕೊಂಡು ಹೋಯಿತು. ಆಗ ಅವರು ಆ ಕತ್ತಲೆಯಲ್ಲಿ ಹಾಗೇ ಮುಂದೆ ನಡೆದರು.

ಇವರು ಮೊಗಲರಿಗೆ ಮಾಂಡಲಿಕನಾದ ಒಬ್ಬ ರಜಪೂತ ಅರಸನ ಸೈನಿಕರು ಅಧಿಕಾರದ ಮೋಹಕ್ಕಾಗಿ ಸ್ವಾತಂತ್ರ್ಯ ಮಾನ ಶೀಲಗಳನ್ನು ಕಳೆದುಕೊಂಡ ತಮ್ಮ ಅರಸನಲ್ಲಿ ಇರಲಿಕ್ಕೆ ಒಪ್ಪದೆ ಮಹಾರಾಣಾ ಪ್ರತಾಪನಲ್ಲಿ ಆಶ್ರಯಕ್ಕಾಗಿ ಹೋದವರು ಆದರೆ ಆತನಿಂದ ಆಶ್ರಯ ಸಿಗದಾಗಲು ದಕ್ಷಿಣ ದಿಕ್ಕಿಗೆ ಸಾಗಿವರು ಇವರೇ ಕರ್ನಾಟಕದ ಇಂದಿನ ಸೂರ್ಯವಂಶ ಕ್ಷತ್ರಿಯರು ಕಲಾಲರು;

# ದಾರಿಯಲ್ಲಿ

ಸ್ವಾತಂತ್ರ್ಯದ ರಾಜ್ಯದ ಏರುತ್ತ ನಡೆದ ಆ ರಾತ್ರಿಯ ಕಿರು ಬೆಳಕಿನಲ್ಲಿ ಅವರು ಅಡವಿಯಲ್ಲಿ ಹೊರಟಿದ್ದಾರೆ. ಅರಮನೆಗಳನ್ನು ಹೋಲುವ ಭವ್ಯ ಪ್ರಾಕಾರಗಳಲ್ಲಿ ಅರಸೊತ್ತಿಗೆಯಂಥಹ ಸುಖವಿಲಾಸಗಳನ್ನನುಭವಿಸಿದ ಆ ಪರಿವಾರದೊಳಗಿನ ಸ್ತ್ರೀಯರು ಕತ್ತಲೆಯಲ್ಲಿ ಹೊರಗೆ ಬರದ ಆ ಕ್ಷತ್ರಿಯ ಲಲನೆಯರು ಮಕ್ಕಳನ್ನಾಡಿಸಲು ದಾಸಿಯರನ್ನಿಟ್ಟ ಆ ಅಂಗನೆಯರು ಇಂದು ರಾತ್ರಿ ಕೆಲರು ಕುದುರೆಗಳ ಮೇಲೆ ಕೆಲವರು ಬರಿಗಾಲಿನಿಂದ ನಡೆಯುತ್ತ ಎಳೆಮಕ್ಕಳನ್ನು ಎದೆಗವಚಿಕೊಂಡು ಬೆನ್ನಿಗೆ ಕಟ್ಟಿಕೊಂಡು ಈ ಹಿಂದೆ ರಥಗಳಲ್ಲಿ ಮೆತ್ತನೆಯ ಆಸನಗಳ ಮೇಲೆ ಕೂತು ಪ್ರವಾಸಮಾಡಿದ ಗತಜೀವನವನ್ನು ಮನದಲ್ಲಿ ಯೋಚಿಸುತ್ತ ನಾಗುತ್ತಿದ್ದಾರೆ.

ಆ ಸುಗಂಧಿಯರು ಎಂದೂ ನಡೆದವರಲ್ಲವಾದರೂ ಇಂದು ತಮ್ಮ ಶೀಲ ರಕ್ಷಣೆಗಾಗಿ ಆ ಕಾಡು ದಾರಿಯಲ್ಲಿ ಎಡವುತ್ತ ಮುಗ್ಗುತ್ತ ನಡೆಯುತ್ತಿರುವಾಗ ಶ್ರಮವಾದರೂ ಕೂಡ ಲಕ್ಷಕ್ಕೆ ತಾರದೆ ಇಲ್ಲಿದ್ದರೆ ತಮ್ಮ ಗತಿಯೇನು? ಎಂಬ ವಿಚಾರದಿಂದ ಆ ದಣಿವು ಮಾಯವಾಗಿ ಅವರಿಗೆ ಇನ್ನೂ ನಡೆಯುವ ಹುರುಪು ಬರುತ್ತಿತ್ತು.

ಆ ಪರಿವಾರದಲ್ಲಿ ಎಲ್ಲಕ್ಕೂ ಮುಂದೆ ಕೆಲ ಗಂಡಸರು ಅವರ ಹಿಂದೆ ಕುದುರೆಗಳು ಆ ಕುದುರೆಗಳ ಮೇಲೆ ಸಣ್ಣ ಮಕ್ಕಳು ಅಶಕ್ತರಾದ ಮುದುಕರು ಅವುಗಳ ಮೇಲೆ ಹೇರಿದ ಭಾರದ ಮೇಲೆ ಕೂತಿದ್ದರು. ಆ ಕುದುರೆಗಳಾದರೂ ತಮ್ಮ ಒಡೆಯರ ಸಂಕಟದಲ್ಲಿ ನೆರವಾದರೇನೇ ತಮ್ಮ ಜೀವ

ನದ ಹೆಮ್ಮೆ ಎಂದರಿತು ಸಹಿಸಲಸಾಧ್ಯವಾದ ಭಾರವಿದ್ದರೂ ಬೇಗಬೇಗ ನಡೆಯುತ್ತಿದ್ದವು. ಆ ಕಲ್ಲುದಾರಿಯಲ್ಲಿ ಕಾಲುಗಳನ್ನಿಟ್ಟಾಗ ಆಗುತ್ತಿರುವ ಸಪ್ಪಳದಿಂದ ಆ ರಮಣಿಯರು ಎಚ್ಚರಿಕೆಯಿಂದ ಕಾಲುಗಳನ್ನಿಡುತ್ತ ಹೊರಟಿದ್ದರು. ಈ ತಂಡದ ಹಿಂದೆಯೂ ಪುರುಷರು ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿ ನಡೆದಿದ್ದರು. ಹೀಗೆ ಅವರು ಸಾಗುತ್ತಿರಲು ರಾತ್ರಿಯು ಸರಿದು ಬೆಳಗಿನ ತಂಗಾಳಿಯು ಮೆಲ್ಲನೆ ಸುಳಿಯಹತ್ತಿತು ಹಕ್ಕಿಗಳು ಕಿಲಿಬಿಲಿಸಪ್ಪಳದೊಡನೆ ಹಾರಾಡಹತ್ತಿದವು. ಆಗ ಅವರು ಅಲ್ಲಿಯೇ ಒಂದು ತಮಗನುಕೂಲ ಸ್ಥಾನವನ್ನು ನೋಡಿ ಮರೆಯಲ್ಲಿ ಎಲ್ಲರೂ ತಂಗಿದರು. ಬೆಳಗಾಯಿತು. ಪೂರ್ವದಿಗಂತದಲ್ಲಿ ಕೆಂಪಾದ ರಂಗು ಮೆಲ್ಲನೆ ಹರಡಿತು. ಅರುಣನು ಕೆಂಪು ಕುಂಕುಮವನ್ನು ತುಂಬಾ ಲೇಪಿಸಿಕೊಂಡು ಉದಯಿಸಿದನು. ಜಗತ್ತೆಲ್ಲವೂ ಚೇತರಿಸುವ ಸುಸಮಯವದು. ಗಂಡುಹೆಣ್ಣುಗಳಲ್ಲಿ ಚೈತನ್ಯವು ಉಕ್ಕಿ ತಮ್ಮ ದೈನಂದಿನ ಕಾರ್ಯಗಳಲ್ಲಿ ತೊಡಗುವ ಪ್ರಭಾತಕಾಲವದು. ಆದರೆ ಈ ಪರಿವಾರವು ಅಡವಿಯಲ್ಲಿ ಮರೆಯಲ್ಲಿ ಎಲ್ಲವನ್ನೂ ಮರೆತು ನಿದ್ರಾಂಗನೆಯನ್ನು ಶೂನ್ಯ ಮಸ್ಕರಾಗಿ ಅಪ್ಪಿದ್ದಾರೆ. ನಡಿದು ದಣಿದ ಅವರು ಅಂಗಾಂಗಗಳ ಪರಿವೆ ಇಲ್ಲದೆ ಅತ್ತಿತ್ತ ಹೊರಳಾಡಿ ತಾವೇ ತಾವಾಗಿ ನೆಲೆಯಿಲ್ಲದಷ್ಟು ವಿಶ್ರಾಂತಿಯನ್ನು ಪಡೆಯುತ್ತಿದ್ದಾರೆ. ಮೆಲ್ಲನೆ ಏರುತ್ತಿರುವ ಸೂರ್ಯನ ಕಿರಣಗಳು ಬಂದು ಚುಚ್ಚಲು ಎಚ್ಚರಾಗಿ ಎಲ್ಲರೂ ಎದ್ದು ಕುಳಿತು ತಮ್ಮ ಪ್ರಾಥರ್ವಿಧಿಗಳನ್ನು ತೀರಿಸಿ ಮತ್ತೆ ಹೊರಡಲನುವಾದರು. ಬೇಕು ಬೇಕಾದ ಹಾಳು ಹರಟೆ ಹೊಡೆಯುತ್ತ ಅವರು ಸಾಗಿರಲು ಮುಂದೆ ಸಮೀಪದಲ್ಲಿ ಒಂದು ಬೈಲು ಪ್ರದೇಶವು ಹತ್ತಿತು. ಆ ಬೈಲಿನಲ್ಲಿ ಅವರು ಸಾಗಿರಲು ಎಡಬಲಗಳಲ್ಲಿ ಮುರಿದು ಬಿದ್ದ ಕೈ ಕಾಲು ಬೆನ್ನೆಲಬುಗಳ ಮೂಳೆಗಳು ದೃಷ್ಟಿಗೆ ತಾಕಹತ್ತಿದವು. ಇದನ್ನು ನೋಡುತ್ತ ಆ ಪರಿವಾರವು ಆಶ್ಚರ್ಯಮಗ್ನವಾಗಿ ಸಾಗಿತು. ಅದು ಒಂದು ರಣಕ್ಷೇತ್ರವಾಗಿತ್ತು. ಅಲ್ಲಲ್ಲಿ ರಕ್ತರಂಜಿತವಾದ ಹುಡಿಯು ಗಾಳಿ ಬೀಸಲು ಹಾರಿ ಇವರನ್ನು ಮುತ್ತುತ್ತಿತ್ತು. ಆನೆ, ಒಂಟೆ, ಕುದುರೆಗಳ ಅಸ್ತಿಗಳು ಮುರಿದ ರಥಗಳ ಗಾಲಿಗಳು, ಕತ್ತರಿಸಲ್ಪಟ್ಟ ಶಸ್ತ್ರಾಸ್ತ್ರಗಳು ಚಲ್ಲಾಪಿಲ್ಲಿಯಾಗಿ ಹರಡಿದ್ದವು. ಇದನ್ನೆಲ್ಲ ನೋಡಿ ಅವರಿಗೆ ಭಯಂಕರ ಸಂಕಟ

ವಾಯಿತು ಅಗಲಿದ ಅಣ್ಣ ತಮ್ಮಂದಿರು, ಅಳಿದ ಮಕ್ಕಳು, ಬಂಧು, ಆಪ್ತ, ಮಿತ್ರರು ಪಾರತಂತ್ರ್ಯದ ಬಲವಾದ ಸಂಕೋಲೆಗಳನ್ನು ಕತ್ತರಿಸಹೋಗಿ ಇಂಥ ರಣಾಂಗದಲ್ಲಿಯೇ ತಮ್ಮ ದೇಹದಲ್ಲಿ ಒಂದು ಹನಿ ರಕ್ತವಿರುವವರೆಗೂ ಯುದ್ಧ ಮಾಡಿ ವೀರಸ್ವರ್ಗವನ್ನೈದಿದವರ ನೆನಪಾಗಿ ಕಣ್ಣುಗಳು ಒದ್ದೆ ಯಾದವು. ಹಿರಿಯರು ಇದನ್ನು ತೋರಗೊಡದೆ ಬೇಗಬೇಗ ಸಾಗಿರಿ. ಎಂದು ಸಮಾಧಾನ ಹೇಳುತ್ತ ನಡೆದರು ಸೂರ್ಯನು ಪಶ್ಚಿಮದಲ್ಲಿ ಮುಳು ಗಿದನು. ಅಡವಿಯಲ್ಲಿ ಕ್ರೂರ ಗರ್ಜನೆ ಕೇಳಹತ್ತಿತು. ಈ ರಾತ್ರಿಯನ್ನು ಎಲ್ಲಿ ಕಳೆಯಬೇಕೆಂದು ಯೋಚಿಸುತ್ತ ಭರಭರ ಸಾಗಹತ್ತಿರಲು ದೂರ ದಲ್ಲಿ ಒಂದು ದೇವಾಲಯ ಹತ್ತಿತು. ಅಲ್ಲಿಯೇ ಅವರು ಆ ರಾತ್ರಿಯನ್ನು ಕಳೆದು ಮುಂದೆ ಸಾಗಿದರು. ಹೀಗೆ ಕೆಲದಿನ ಹಗಲು ರಾತ್ರಿ ಪ್ರವಾಸ ಮಾಡಿ ಕೊನೆಗೆ ರಜಪೂತಸ್ಥಾನದ ಅಂತ್ಯಮೇರೆಗೆ ಬಂದು ತಲ್ಪಿದರು.

ಅಂದು ವಸಂತಕಾಲದ ಶುಕ್ಲಪಕ್ಷದ ರಾತ್ರಿ ಎಲ್ಲೆಡೆಗೂ ಚಿಗುರು ಗಿಡಗಳ ಮೇಲೆ ಚಂದ್ರನು ತನ್ನ ಪ್ರಶಾಂತ ಕಿರಣಗಳಿಂದ ಬೆಳಗಹತ್ತಿ ದ್ದಾನೆ. ಆ ಮಂಗಲವಾದ ತಂಪು ಪ್ರಕಾಶದಿಂದ ಶೋಭಿಸುತ್ತಿದ್ದ ನಿಸರ್ಗ ಇಂಥ ಪ್ರಶಾಂತ ಕಾಲದಲ್ಲಿ ತಮ್ಮ ಗ್ರಹಗಳಲ್ಲಿ ಸಂತೋಷದ ಹಾಲು ಹೊಳೆ ಹರಿಸುವದಕ್ಕೆ ಪ್ರತಿಯಾಗಿ ಅಡವಿಯಲ್ಲಿ ಕಣ್ಣೀರು ಸುರಿಸುತ್ತಿದ್ದಾರೆ. ಅವರ ಮನದಲ್ಲಿ ಇಲ್ಲಿಲ್ಲದ ಕಲ್ಪನೆಗಳು ತಾಂಡವವಾಡುತ್ತಿವೆ. ನಿರ್ವಾ ಹವಿಲ್ಲದೆ ಅವರು ತಮ್ಮ ಪ್ರಯಾಣದ ಸಿದ್ಧತೆ ನಡಿಸಿದ್ದಾರೆ. ದುಃಖ ದಿಂದ ಮೌನರಾಗಿದ್ದಾರೆ ಎಲ್ಲರೂ ಕೂಡಿ ತಮ್ಮ ತಾಯಿನಾಡಿನ ಕೊ ನೆಯ ಗಡಿಗೆ ನಮಸ್ಕರಿಸಿ ಪ್ರಾರ್ಥಿಸಿದರು:—

‘ತಾಯೇ ನೀನೆಮಗೆ ಜನ್ಮದಾತಳು. ಹಾಲುಣಿಸಿ ಮುದ್ದುಕೊಟ್ಟು ಅನ್ನಕೊಟ್ಟು ಬೆಳೆಸಿದೆ. ಆದರೆ ನಾವಿಂದು ನಿನ್ನ ನೀತಿ ಸ್ವಾತಂತ್ರ್ಯಗಳ ರಕ್ಷಣೆಗಾಗಿ ಎಲ್ಲವನ್ನೂ ಬಿಸುಟಿ ಹೊರಟಿರುವೆವು. ನಾವು ಕುಲಭ್ರಷ್ಟ ರಾಗಲಾರೆವು. ಅದಕ್ಕಾಗಿ ನಾವಿಂದು ಅಜ್ಞಾತರಾಗಿ ಸಾಗಿರುವೆವು. ದೇವಿ ಕಾಲವು ಕೂಡಿ ಬಂದರೆ ಮತ್ತೆ ನಿನ್ನ ಪಾದದರ್ಶನ; ಜನನೀ ಕರುಣಿಸು; ಅಪ್ಪಣೆಕೊಡು;’ ಹೀಗೆ ಪ್ರಾರ್ಥಿಸುವಾಗ ಅವರ ಕುತ್ತಿಗೆ ಬಿಗಿದು ಶಬ್ದ

ಗಳು ಒಳಗೇ ಕರಗಿ ಧಾರಾಳವಾಗಿ ಕಂಬನಿಗಳು ಸುರಿದವು ಈ ದೃಶ್ಯ ವನ್ನು ನೋಡಲಿಕ್ಕಾಗದೆ ಚಂದ್ರನು ಮೋಡಗಳಲ್ಲಿ ಅಡಗಿದ ಹೆಣ್ಣು ಮಕ್ಕಳಂತೂ ದನಿತೆಗೆದು ಅತ್ತರು. ಕೊನೆಗೊಮ್ಮೆ ಅವರು ದೀರ್ಘವಾಗಿ ನಮಸ್ಕರಿಸಿ ಸರಸರನೆ ಮುಂದೆ ಸಾಗಿದರು. ಇವರೇ ಇಂದು ಕನ್ನಡನಾ ಡಿನಲ್ಲಿ ಸೂರ್ಯವಂಶ ಕ್ಷತ್ರಿಯರೆಂದು ಮದ್ಯವನ್ನೂ, ಮಾಂಸವನ್ನೂ, ವಿಕ್ರಯಿಸುತ್ತ ಜೀವಿಸುತ್ತಿರುವ ಜನರು ಕಲಾಲರು, ಕ್ಷತ್ರಿಯರು.

# ಸಂಕಟಗಳು

ಇತ್ತ ಈ ಸರದಾರರು ಹೊರಟು ಹೋದುದನ್ನು ಕೇಳಿ ಅವರ ಅರಸ ನಿಗೆ ಗಾಯದಲ್ಲಿ ಉಪ್ಪು ಕೂಡಿಸಿದಂತಾಯಿತು. ಅವನ ಪಿತ್ತ ನೆತ್ತಿಗೇರಿತು. ಅವರನ್ನು ಕೂಡಲೆ ಸೆರೆಹಿಡಿದು ತರಲಿಕ್ಕೆ ತನ್ನ ಸರದಾರರಿಗೆ ಆಜ್ಞೆಮಾಡಿ ದನು. ಈ ಸಂಗತಿಯನ್ನು ರಾಣಾನ ಗುಪ್ತಚಾರರು ತಿಳಿದು ಶೋಧ ಕ್ಕಾಗಿ ಹೊರಟ ಸರದಾರರಿಗೆ ಕಾಡು ಜನರ ವೇಷ ಧರಿಸಿ ದಾರಿಯಲ್ಲಿ ಎದುರಾಗಿ ಈ ದಾರಿಯಲ್ಲಿ ನಾಲ್ಕಾರು ದಿನಗಳಿಂದ ಯಾರೂ ಬಂದಿಲ್ಲೆಂದು ಹೇಳಿ ಹಿಂದಕ್ಕೆ ತಿರುಗಿಸಿದರು. ಅವರು ಹಿಂತಿರುಗಿ ದೊಡ್ಡ ಮಾರ್ಗವನ್ನು ಹಿಡಿದು ಹುಡುಕುತ್ತ ನಾಗಿದರು.

ಇತ್ತ ಪ್ರತಾಪನು ಈ ಸಂಗತಿಯನ್ನು ತನ್ನ ನಂಬಿಗೆಯ ಸೇವಕ ನಿಂದ ತಿಳಿಸಲು ಕಳುಹಿದನು. ಈ ಕ್ಷತ್ರಿಯ ಪರಿವಾರವು ರಜಪೂತಸ್ಥಾ ನವನ್ನು ದಾಟಿ ಸ್ವಲ್ಪ ಮುಂದೆ ಹೋದಾಗ ಆ ಸೇವಕನು ಇವರನ್ನು ಕೂಡಿ ತನ್ನೊಡೆಯನಿತ್ತ ಸಂದೇಶವನ್ನು ಅವರಿಗಿತ್ತನು. ಅದರಲ್ಲಿ ಹೀ ಗಿತ್ತು- ' ನಾಡಿನ ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನು ಬಿಸುಟ ನಡೆದ ಮಹಾ ಧೀರರೇ, ನಿಮ್ಮ ಮಾರ್ಗವು ಭಯಂಕರ ಕಂಟಕಗಳಿಂದ ಕೂಡಿದೆ. ನಿಮ್ಮ ಅರಸನು ನಿಮ್ಮನ್ನು ಸೆರೆಹಿಡಿಯುವದಕ್ಕಾಗಿ ತನ್ನ ಸರದಾರರನ್ನು ಕಳಿಸಿ ರುವನು. ಅವರನ್ನು ದಂಡಿಸುವದಕ್ಕಾಗಿ ನಾನೂ ಕೆಲವರನ್ನು ಕಳು ಹಿದ್ದೇನೆ ನನ್ನವರು ಅರವಲೀ ಬೆಟ್ಟದ ಕೊನೆಗೆ ಅವರನ್ನು ಸಂಧಿಸಿ ಸಂಹರಿಸಬಹುದು. ಇಲ್ಲವೆ ಆ ಅಧಮರು ಮೊದಲೇ ನಿಮ್ಮನ್ನು ಹಿಡಿ ಯಲು ಓಡಿಬರಬಹುದು. ಆದ್ದರಿಂದ ಈ ಪ್ರಸಂಗವು ಕೊನೆಗೊಳ್ಳುವವರೆಗೆ

ರಜಪೂತಸ್ಥಾನವನ್ನು ಬಿಡಬೇಡಿರಿ. ಯಾಕಂದರೆ ಈ ಗದ್ದಲವು ಅಕಬರನ ರಾಜ್ಯದಲ್ಲಾದರೆ ಪ್ರಸಂಗವು ದೀರ್ಘವಾದೀತು. ಕಾರಣ ನೀವೆಲ್ಲರೂ ಪ್ರಸಂಗಕ್ಕೆ ತಕ್ಕಂತೆ ವರ್ತಿಸಿರಿ.' ಮುಖ್ಯಸ್ಥನು ಪತ್ರವನ್ನು ಎಲ್ಲರಿಗೂ ಓದಿ ಹೇಳಿದನು. ಈ ಸಂಗತಿಯನ್ನು ಕೇಳಿ ಎಲ್ಲರಲ್ಲೂ ಶೌರ್ಯ ಸಂಚಾರವಾಯಿತು ಸ್ತ್ರೀಯರುಕೂಡ ಸಿಟ್ಟಿಗೆದ್ದು ಸಿಂಹಿಣಿಯರಂತೆ ಕೆರಳಿ ಜೈ ಮಹಾಕಾಲಿ! ಎಂದು ಘೋಷಿಸುತ್ತ ಪುರುಷರ ಟೊಂಕಗಳಲ್ಲಿ ನೇತಾಡುವ ಖಡ್ಗಗಳಿಗೆ ಕೈಯಿಕ್ಕಿದರು. ಆ ರಾತ್ರಿಯಲ್ಲವೂ ಬೇಟೆ ಹುಡುಕುವವರಂತೆ ಜಪ್ಪಿಸಿದರು. ಮರುದಿನ ಬೆಳಗಾಯಿತು. ಎಲ್ಲರೂ ಆಯುಧಧಾರಿಗಳಾಗಿ ಆವೇಶ ತುಂಬಿದವರಾಗಿದ್ದಾರೆ. ಅದೇ ಸೂರ್ಯನು ಮೂಡುತ್ತಿರುವಾಗ ದೂರದಲ್ಲಿ ಧೂಳಿ ಎದ್ದಿತು. ಸಪ್ಪಳ ಕೇಳಹತ್ತಿತು. ಹುಡುಕಿದರೆ ಸಿಗದ ಬೇಟೆ ಎದುರಿಗೆ ಬಂದಂತಾಯಿತು ಸ್ವಲ್ಪಕಾಲದಲ್ಲಿಯೇ ದಿಗಂತವು ಪ್ರತಿಧ್ವನಿಯಾಗುವಂತೆ ಜಯಘೋಷ ಮಾಡುತ್ತ ಇವರನ್ನು ಸೆರೆ ಹಿಡಿಯಲು ಆ ಸೈನಿಕರು ಧಾವಿಸಿ ಬಂದರು. ಇವರೂ ಪ್ರತಿಯಾಗಿ ಹರಹರ ಮಹಾದೇವ ಎಂದು ಘೋಷಿಸುತ್ತ ಅವರಮೇಲೆ ಸಾಗಿದರು. ಎರಡೂಕಡೆಯವರಲ್ಲಿ ಭಯಂಕರ ಬಡಿಬಾಟವಾಯಿತು. ಆ ವೀರ ವನಿತೆಯರು ಜೀವದ ಹಂಗುದೊರೆದು ಧುಮುಕಿ ವೈರಿ ಸೈನ್ಯದ ಕುದುರೆಗಳ ಕಾಲು ಕತ್ತರಿಸ ಹತ್ತಿದರು. ಈ ಭಯಂಕರ ಹೋರಾಟಕ್ಕೆ ಅವರ ಧೈರ್ಯ ಕುಂದಿತು. ಕುದುರೆಗಳನ್ನು ಕಳೆದುಕೊಂಡು ಗಾಯಗೊಂಡು ಓಡುತ್ತಿರುವವರನ್ನು ಈ ಧೀರಾಂಗನೆಯರು ಎರಗಿದರು. ಯದುರಿನಿಂದ ಈ ಸ್ವಾತಂತ್ರ್ಯಪ್ರೇಮಿ ಕ್ಷತ್ರಿಯ ಸರದಾರರಿಗೆ ಸಹಾಯ ಮಾಡಲು ಮಹಾರಾಣಾನ ಅನುಚರರೂ ಬಂದರು. ಜೋಧಪುರ ಸರದಾರ ಸ್ಥಿತಿಯು ಇತ್ತಬಿದ್ದರೆ ಕೆರೆ ಇತ್ತಬಿದ್ದರೆ ಭಾವಿ ಎಂಬಂತಾಯಿತು. ಅವರೆಲ್ಲ ಇನ್ನು ತಮಗೆ ಉಳಿಗಾಲವಿಲ್ಲೆಂದು ಜೀವದಾಸೆಯಿಲ್ಲದೆ ಕಾದಿ ಮರಣ ಹೊಂದಿದರು. ಇವರಲ್ಲಿಯೂ ಗಾಯಗೊಂಡವರಿಗೆ ತಮಗೆ ಗೊತ್ತಿದ್ದ ಮದ್ದುಗಳನ್ನು ಹಾಕಿ ಕಟ್ಟಿದರು. ಈ ಕದನದಲ್ಲಿ ದೊರೆತ ಆಯುಧ, ಕುದುರೆಗಳನ್ನು ರಾಣಾನಿಗೆ ಕಾಣಿಕೆಯಾಗಿ ಒಪ್ಪಿಸಿದರು. ಈಗ ಅವರಿಗೆ ತಮ್ಮ ಸ್ಥಿತಿಯನ್ನು ನೆನೆದು ಉದಾಸೀನತೆಯಾಯಿತು. ಮತ್ತು ಈಸ್ಥಿತಿ

ಯಲ್ಲಿಯೇ ಅಕಬರನ ರಾಜ್ಯವನ್ನು ದಾಟಿ ದಕ್ಷಿಣಕ್ಕೆ ಹೋಗುವದು ಅಸಾಧ್ಯ ಅಪಾಯಕರ ಎಂದು ತಿಳಿದು ತಮ್ಮ ಆಯುಧಗಳನ್ನೂ ರಾಣಾನಿಗೆ ಒಪ್ಪಿಸಲು ಕೊಟ್ಟರು. ಮತ್ತು ತಾವು ಉತ್ತರದೇಶದ ವೈದ್ಯರ ವೇಷ ಧರಿಸಿ ಹೊರಟರು ವಿಂಧ್ಯಪರ್ವತದಲ್ಲಿ ಕೆಲ ವನಸ್ಪತಿಗಳನ್ನು ಸಂಗ್ರಹಿಸಿ ಮುಂದೆ ನಡೆದರು ಈಗಮಾತ್ರ ಅವರಿಗೆ ಅಂಜಿಕೆ ಕಡಿಮೆ ಆದಂತೆ ಅನಿಸಿತು. ಹಾಗೇ ಕೆಲದಿನ ಪ್ರವಾಸ ಮಾಡುತ್ತ ಗುಜರಾಥವನ್ನು ತಲ್ಪಿದರು. ನೂರಾರು ಜನ ಗುಂಪುಕಟ್ಟಿ ಒಂದೆಡೆಯಿಂದ ಸಾಗುವದು ಹಿತಕರವಲ್ಲೆಂದು ಯೋಚಿಸಿ ತಮ್ಮೊಳಗೆ ಎರಡು ಬಣಗಳನ್ನು ಮಾಡಿ ಒಂದು ಬಣದವರು ಅಹಮ್ಮದನಗರ ವಿಜಾಪೂರಗಳೊಳಗಿಂದ ದಕ್ಷಿಣದ ಹಿಂದೂಪಾಳ್ಯಗಾರರ ರಾಜ್ಯವನ್ನು ಸೇರಬೇಕೆಂತಲೂ ಮತ್ತೊಂದು ಪಂಗಡದವರು ಖಾನದೇಶ ವರ್ಹಾಡಗಳ ಮೇಲಿಂದ ಗೋವಳಕೊಂಡ ರಾಜ್ಯದೊಳಗಿನಿಂದ ಅವರೂ ಪಾಳ್ಯಗಾರರಾಜ್ಯವನ್ನೇ ಮುಟ್ಟತಕ್ಕದ್ದೆಂದೂ ನಿಶ್ಚಯಿಸಿದರು ಈಗ ಮತ್ತೆ ಅವರಿಗೆ ಅಪಾರ ಸಂಕಟವಾಯಿತು ಆದರೆ ತಮ್ಮೆಲ್ಲರ ಸುರಕ್ಷಿತತೆಗಾಗಿ ಈ ಅಗಲುವಿಕೆಯಿಂದ ದಕ್ಷಿಣದಲ್ಲಿ ಮತ್ತೆ ಕೂಡುವ ವಿಶ್ವಾಸದಿಂದ ಸಮಾಧಾನಪಟ್ಟು ಪರಸ್ಪರರನ್ನು ಆಲಿಂಗಿಸಿ ಬೇರೆಬೇರೆ ದಿಕ್ಕುಗಳಲ್ಲಿ ವೈದ್ಯರೆಂದು ಹೇಳುತ್ತ ನಡೆದರು.

ಆಗ ಅದೇ ಮಳೆಗಾಲದ ಆರಂಭ ಮಳೆ ಕರೆಯುವದಕ್ಕಾಗಿ ಬೀಸುತ್ತಿದ್ದ ಗಾಳಿಯಿಂದ ಸಹ್ಯಪರ್ವತದಮೇಲೆ ತೆರಪಿಲ್ಲದೆ ಬೀಳುವ ಮಳೆಯಿಂದ ಕೆಸರು ನೀರು ಗಾಳಿಗಳಲ್ಲಿ ನಡೆಯುವದರ ಪರಿಣಾಮವಾಗಿ ಕೆಲ ಜನ ವೃದ್ಧರಿಗೆ ಬೇನೆ ಹತ್ತಿತು. ಗುಣವಾಗುವ ಲಕ್ಷಣವಿಲ್ಲದಾಯಿತು. ಕೆಲಕಾಲ ಅಲ್ಲಿಯೇ ವಾಸ ಮಾಡಬೇಕೆಂದು ಯೋಚಿಸಿದರು. ಆದರೆ ಅದು ಅಕಬರನ ರಾಜ್ಯವೆಂದರಿತು ಅಲ್ಲಿರುವದು ಹಿತಕರವಲ್ಲೆಂದು ಯೋಚಿಸಿ ಇನ್ನೂ ಕೆಲದಿನ ಮುಂದೆ ಹೋದರೆ ಅಹಮ್ಮದನಗರ ರಾಜ್ಯ ಬರುವದೆಂದು ನಿಶ್ಚಯಿಸಿ ನಡೆದರು

ತುಂಬಿ ಹರಿಯುತ್ತಿರುವ ನರ್ಮದೆ, ತಾಪಿಗಳನ್ನು ದಾಟಿ ಮುಂದೆ ಸಾಗುತ್ತಿರುವಾಗ ಅವರ ಬೇನೆ ಇನ್ನೂ ಹೆಚ್ಚಿತು. ಇಂಥ ಪರಿಸ್ಥಿತಿಯಲ್ಲಿ

ಯೂ ಕೂಡ ಅಲ್ಲಿರದೆ ಅಕಬರನ ರಾಜ್ಯವನ್ನು ದಾಟಿದರು. ಇಷ್ಟಾಗು ವಷ್ಟರಲ್ಲಿ ಆ ಮುದುಕರು ಪೂರಾ ಹಾಸಿಗೆಹಿಡಿದರು. ಅಂತ್ಯಕಾಲಕ್ಕೆ ಇಂಥ ವನವಾಸ ಬಂದದ್ದಕ್ಕಾಗಿ ಅವರಿಗೆ ಬಲು ಸಂಕಟವಾಯಿತು. ದಕ್ಷಿಣದಲ್ಲಿ ಎಲ್ಲರೂ ಭೆಟ್ಟಿಯಾದಾಗ ಹಿರಿಯರೆಲ್ಲಿ ಎಂದು ಕೇಳಿದರೆ ಏನು ಹೇಳೋಣ ಎಂದು ಬಾಯಿ ಬಿಡಹತ್ತಿದರು. ಅಯ್ಯೋ ಹಿರಿಯರೇ ನೀವು ಹೋಗುವಿರಾ ? ಈ ನಿರ್ಭಾಗ್ಯರನ್ನು ತೊರೆದು ಸಾಗುವಿರಾ ? ನೀವು ಹೋದರೆ ನಮ್ಮ ಗತಿಯೇನು ? ಅಂಜಿಕೆಯು ನಮ್ಮನ್ನು ಇರಿಯಬಹುದು. ಅಜ್ಞಾನವು ಕೊರೆಯಬಹುದು. ನಮ್ಮ ಆಶಾಂಕುರವು ಕಮುರುತಿದೆ. ಅಯ್ಯೋ ನಮ್ಮ ಆಕಾಂಕ್ಷೆಯ ಗೋಪುರವು ಉರುಳುತಿದೆ. ಏನು ಮಾಡೋಣ. ಹೊಟ್ಟೆ ಉರಿಯುತಿದೆ ಎಂದವರು ಆಲಾಪಿಸ ಹತ್ತಿದರು. ಆದರೇನು ? ಎಲ್ಲರೂ ಸುತ್ತುಮುತ್ತು ನೆರೆದು ನಿಮ್ಮ ಇಚ್ಛೆಯೇನು ? ನಿಮ್ಮ ಸಂತೋಷಕ್ಕಾಗಿ ನಾವೇನು ಮಾಡೋಣ ಎಂದು ಕೇಳಿದರು. ಆಗ ಮುದುಕರು ಏನೂಇಲ್ಲ. ನಮ್ಮ ಇಚ್ಛೆಯೊಂದೇ; ಮುಸಲ್ಮಾನರಿಗೆಮಾತ್ರ ನಮ್ಮ ನಾರಿಯರನ್ನು ಒಪ್ಪಿಸಬೇಡಿರಿ ಎಂದುಸಿರಿ ಸ್ವರ್ಗಕ್ಕೆ ಸಾಗಿದರು. ಯಥಾವಿಧಿ ಅವರನ್ನು ಚಿತೆಗೊಪ್ಪಿಸಿ ದುಃಖಿಸುತ್ತ ಮುಂದೆ ನಡೆದರು.

ಇತ್ತ ಗೋವಳಕೊಂಡದ ಕಡೆಗೆ ಸಾಗಿದ ಸಮೂಹವು ಖಾನದೇಶ ವರ್‍ಹಾಡ ಪ್ರಾಂತಗಳಲ್ಲಿ ವೈದ್ಯಗಾರರೆಂದು ಹೇಳಿಕೊಳ್ಳುತ್ತ ಅಲ್ಲಲ್ಲಿ ಇಳಿಯುತ್ತ ಉಳಿಯುತ್ತ ಸೊಬಗಿನಿಂದ ವಿಂಧ್ಯಪರ್ವತದ ಕಂಟಿ ತುಂಬಿದ ಅಡವಿಯನ್ನು ದಾಟಿ ವೈನಗಂಗೆಯ ಕೊಳ್ಳದ ಭೂಮಿಯನ್ನು ನೋಡಿ ವರ್‍ಹಾಡದ ಕಪ್ಪು ಭೂಮಿಯನ್ನು ತುಳಿಯುತ್ತ ಉಲ್ಹಾಸದಿಂದ ತಮ್ಮ ಸ್ಥಿತಿಯನ್ನು ಮರೆತು ಮಳೆಗಾಲದ ಆರಂಭಕ್ಕೆ ಗೋವಳಕೊಂಡ ರಾಜ್ಯವನ್ನು ಪ್ರವೇಶಿಸಿದರು. ಯಾವತೊಡಕೂ ಇಲ್ಲದೆ ಅವರು ಪಾರಾಗಿ ದಾರಿಯಲ್ಲಿ ಪಡೆದ ತಮ್ಮ ಸಂತೋಷದ ಅನುಭವಗಳನ್ನು ತಮ್ಮ ಸಹಬಂಧುಗಳಿಗೆ ಸವಿಯಾಗಿ ಹೇಳಬೇಕೆಂದು ಬೇಗ ಅವರನ್ನು ಭೆಟ್ಟಿಯಾಗಬೇಕೆಂದು .ಒಳ್ಳೇ ಉತ್ಸುಕತೆಯಿಂದ ನಡೆದರು. ಅವರು ಮುಂದೆ ಸಾಗುತ್ತಿರಲು ಪೂರ್ವ ಘಟ್ಟದ ಕಡೆಯಿಂದ ಮಳೆಯಾಗಹತ್ತಿತು. ಕಾರ್ಮೋಡಗಳಿಂದ ಗಗನಾಂಗಣವೆಲ್ಲ ತುಂಬಿ ಸೂರ್ಯದರ್ಶನವೇ ಇಲ್ಲದಂತಾಗಿತ್ತು.

ಮೇಲೆ ಮೇಲೆ ಸುರಿಯುವ ಮಳೆಯಿಂದ ಭೂಮಿಯಲ್ಲಾ ನೆನೆದು ಹಳ್ಳ ಕೊಳ್ಳಗಳು ಹರಿಯಹತ್ತಿದವು. ಇಂಥ ಮಳೆಗಾಲದಲ್ಲಿ ಅಲ್ಲಲ್ಲಿ ನಿಲ್ಲುತ್ತ ಸಾಗುತ್ತ, ಎಷ್ಟೋ ಕೆರೆ, ಝರಿ, ಹಳ್ಳಗಳನ್ನೂ ಭೀಮೆಯ ಶಾಖಾ ನದಿಗಳನ್ನೂ ದಾಟಿ ಕೊನೆಗೆ ತುಂಬಿ ಹರಿಯುವ ಭೀಮೆಯಲ್ಲಿ ಹಾದು ಕೃಷ್ಣಾನದಿಯ ಬೈಲನ್ನು ಸೇರಿದರು.

ಈ ವರೆಗೆ ಅವರಿಗೆ ಯಾವ ತೊಂದರೆಯೂ ಉಂಟಾಗಿರಲಿಲ್ಲ. ಗೋವಳಕೊಂಡದ ಬಾದಶಹನು ಇವರನ್ನು ಗುರುತಿಸಲಿಲ್ಲ. ಸಂತೋಷದಿಂದ ಅವರ ಪ್ರಯಾಣವು ನಡೆದಿರುವಾಗ ದೈವವೇ ಅವರ ಮೇಲೆ ಸೇಡು ತೀರಿಸಲು ಸಿದ್ಧವಾಗಿತ್ತು. ಅದು ಹಿಂಗಾರಿಯ ಮಳೆಗಾಲ ಚಿಟಿಚಿಟಿ ಮಳೆಯಲ್ಲ. ಧಾರಾಕಾರವಾಗಿ ಮುಗಿಲು ಹರಿದು ಬೀಳಹತ್ತಿದೆಯೇನೋ ಎನ್ನುವಂತೆ ಸೆಳಕುಗಳಾಗುತ್ತಿದ್ದವು. ಈ ಸ್ಥಿತಿಯಲ್ಲಿ ಅವರು ಅಲ್ಲಿರಲು ಮನಸ್ಸು ಮಾಡದೆ ದುರ್ದೈವವು ಒಡ್ಡಿದ ಸಂಕಟದ ಬಲೆಯಲ್ಲಿ ಸಿಕ್ಕರು.

ಒಂದು ದಿನ ದಾರಿಯಲ್ಲಿ ಕೃಷ್ಣಾತಟಾಕದ ಒಂದು ಹಳ್ಳಿಯಲ್ಲಿ ವಸತಿಮಾಡಿದ್ದಾರೆ. ರಾತ್ರಿಯಲ್ಲಿ ಮೋಡಗಳು ಆಕಾಶವನ್ನು ಮುತ್ತಿ ಕಾರ್ಗತ್ತಲೆಯನ್ನು ಮಾಡಿವೆ. ರಾತ್ರಿ ಹತ್ತು ಗಂಟೆಗೆ ತಂಗಾಳಿ ಭರಭರ ಬೀಸುತ್ತ ಮಳೆಯನ್ನು ಕೂಗಿತು. ಪಟಪಟನೆ ಹನಿಗಳು ಉದುರಹತ್ತಿ ಕೊನೆಗೆ ಜೋರಿನಿಂದ ಮಳೆಹೊಡೆಯಿತು. ಆ ಹಳ್ಳಿಯು ನದಿಯ ದಡದಲ್ಲಿ; ಇವರು ಊರ ಹೊರಭಾಗದ ದೇಗುಲದಲ್ಲಿ; ಮೊದಲೇ ಕೃಷ್ಣೆ ತುಂಬಿ ಹರಿಯುತ್ತಿದ್ದಾಳೆ. ಮಳೆರಾಯನ ತಾಂಡವತೆಗೆ ಸಂತೋಷತುಂಬಿ ಉಕ್ಕುತ್ತಿದ್ದಾಳೆ. ಆ ಭೀಕರ ರಾತ್ರಿಯಲ್ಲಿ ನದಿಯ ನೀರು ವೇಗವಾಗಿ ಊರ ಕಡೆಗೆ ಏರಹತ್ತಿತು. ಊರಲ್ಲೆಲ್ಲ ಜನರು ಗದ್ದಲ ಹಾಹಾಕಾರಗಳನ್ನು ಎಬ್ಬಿಸಿದ್ದಾರೆ. ದನಕರುಗಳನ್ನು ಬಿಚ್ಚಿ ಹೊಡೆದು ಸಂರಕ್ಷಣೆಗಾಗಿ ಮನೆಗಳನ್ನು ಬಿಟ್ಟು ಡೋಣಿಗಳಲ್ಲಿ ಕೂತು ಸಾಗಿದ್ದಾರೆ. ಆಗ ಇವರ ಹಿರಿಯರು ಗುಟ್ಟಾಗಿ ಏನನ್ನೋ ಯೋಚಿಸಿ ಅಂಬಿಗರನ್ನು ಕರೆದು ಎಲ್ಲರನ್ನೂ ಕೂಡಿಸಿ ಕೊನೆಗೆ ತಾವೂ ಕೂತು ನಡೆದರು. ಸ್ವಲ್ಪಕಾಲದಲ್ಲಿ ಊರು

ನೀರಿನಲ್ಲಿ ಕಾಣದಂತಾಗಿ ಮುಳುಗಿತು. ನೀರು ಇನ್ನೂ ಏರುತ್ತಲಿತ್ತು. ಡೋಣಿಗಳು ನೀರಿನ ಮೇಲೆ ಮಕ್ಕಳು ಹೆಂಗಸರು ಗಂಡಸರನ್ನು ಎತ್ತಿಕೊಂಡು ಸಾಗಿವೆ. ಕರಾಳ ಕತ್ತಲೆ; ಮಳೆಯ ಭೀಕರತೆ; ಕೃಷ್ಣೆಯ ಉಗ್ರತೆ; ಇವರು ಕೂತ ಡೋಣಿಗಳು ಭಾರದಿಂದ ಬಳಕಹತ್ತಿದವು. ಅಂಚಿಗೆ ನೀರು ಏರಿ ಡೋಣಿಸಹಿತವಾಗಿ ಜನರು ನೀರುಪಾಲಾಗುವಹೊತ್ತುಬಂತು. ಎಲ್ಲರೂ ಗಾಬರಿಯಾದರು. ತಮ್ಮ ಭಾರವಾದ ಒಂದೊಂದೇ ಸಾಹಿತ್ಯಗಳನ್ನು ಜೀವದಾಸೆಗಾಗಿ ಒಂದೊಂದೇ ಕೃಷ್ಣೆಯಪಾಲು ಮಾಡಿದರೂ ಭಾರ ಕಡಿಮೆಯಾಗದೆ ನೀರುಪಾಲಾಗುವ ಪ್ರಸಂಗಬಂದಿತು ನಾವಿಕರು ಹಾಡು ಹೇಳುತ್ತ ಬೇಗ ಬೇಗ ಹುಟ್ಟು ಹಾಕುತ್ತಿದ್ದರೂ ಕೃಷ್ಣೆಯು ಬೇಗ ದಂಡೆ ತೋರಿಸದೆ ದೂರ ದೂರ ಸಾಗುತ್ತಿದ್ದಾಳೆ. ಗತಿ ಇಲ್ಲದಾಯಿತು. ಆ ಭೋರ್ಗರೆಯುತ್ತಿರುವ ಪ್ರವಾಹದ ಸಪ್ಪಳದಲ್ಲಿ ನಾವಿಕರ ಹಾಡಿನಲ್ಲಿ ಎಲ್ಲರೂ ಅಂಜಿಕೆಯಿಂದ ಮೈಮರೆದು ಕಣ್ಣು ಮುಚ್ಚಿದಾಗ ಹಿರಿಯರು ಮೊದಲೇ ಯೋಚಿಸಿದಂತೆ ಮೆಲ್ಲನೆ ಯಾರಿಗೂ ತಿಳಿಯದಂತೆ ನೀರಿನಲ್ಲಿ ಧುಮುಕಿದರು.

ಮುಂದೆ ಆಶ್ರಯಸ್ಥಾನದಲ್ಲಿ ಇಳಿದಾಗ ಹಿರಿಯರು ಮಾಯವಾದುದನ್ನು ನೋಡಿ ಒಮ್ಮೆಲೆ ರೋಧಿಸಹತ್ತಿದರು. ಅತ್ತರೇನು! ಏನುಮಾಡಿದರೇನು. ಕೃಷ್ಣೆಯು ದೂರದಿಂದ ಬಂದ ಸ್ವಾಭಿಮಾನಿ ಮಕ್ಕಳನ್ನು ಆಹುತಿಗೊಂಡಿದ್ದಾಳೆ. ತಿರುಗಿಕೊಟ್ಟಾಳೆ? ಜೀವಕ್ಕೆ ಜೀವಕೊಡುವ ಹಿರಿಯರು ನೀರುಪಾಲಾದ ಮೇಲೆ ಅವರು ದೇವರನ್ನು ಕಳೆದುಕೊಂಡ ದೇವಾಲಯದಂತಾಗಿ ದುಃಖದಿಂದ ಹಾಗೇ ಕಾಲದೊಡನೆ ಮುಂದೆ ನಡೆದರು. ನಿರಾಶೆ ನಿಟ್ಟುಸಿರುಗಳು ಅವರನ್ನು ಮುತ್ತಿ ಗಾಸಿಗೊಳಿಸಿಬಿಟ್ಟವು. ಇವರೇ ಕರ್ನಾಟಕದ ಇಂದಿನ ಅಲ್ಪಸಂಖ್ಯಾಕ ಕಲಾಲರು.



# ಅಲೆದಾಟ

ಅನಿರೀಕ್ಷಿತವಾದ ಈ ಘಟನೆಯಿಂದ ಈ ಕ್ಷತ್ರಿಯರಿಗೆ ಅಪಾರ ದುಃಖ ವಾಯಿತು. ಜೀವದಂತಿದ್ದ ಹಿರಿಯರು ಏನನ್ನೂ ಹೇಳದೆ ಎಲ್ಲ ಆಶೆಗಳನ್ನೂ ತೊರೆದು ಈ ಜಗದಾಚೆ ದೂರ ಆಕಾಶದಲ್ಲಿ ಹಾರಿದರು. ಅವರೆಲ್ಲ ಶೂನ್ಯ ಹೃದಯರಾಗಿ ಆಕಾಶವನ್ನೇ ನೋಡಿದರು. ಆದರೆ ಅವರಿಗೆ ಅಲ್ಲಿ ಏನೂ ಕಾಣದು. ಎಲ್ಲಿ ನೋಡಿದರೂ ಶೂನ್ಯ, ಆದರೆ ಹಿರಿಯರು! ಇಲ್ಲ ಅವರ ಮನಸ್ಸು ದುಃಖದಿಂದ ಭಾರವಾಗಿದೆ ಅದು ಶಾಂತವಾಗಬೇಕಾದರೆ ಅವರು ತುಂಬಾ ಶೋಕಿಸಬೇಕಾಗಿತ್ತು. ಅತ್ತು ಅತ್ತು ಅವರ ಹೃದಯವು ಶಾಂತವಾಯಿತು. ಎಲ್ಲಕ್ಕೂ ಕೊನೆಇಲ್ಲವೇ, ಹಾಗೆ ಈ ಸಂಕಟಗಳಿಗೂ ಇದೆ. ಈ ಕೊನೆದೂರವೋ? ದೂರವಿರಲಿ ಸಮೀಪವಿರಲಿ. ನಮ್ಮ ಮಾರ್ಗದಲ್ಲಿ ನಾವು ಸಾಗಲೇಬೇಕಲ್ಲವೇ? ಎಂದು ಮನಸ್ಸನ್ನು ಸಮಾಧಾನಗೊಳಿಸಿ ಅವರು ಗೋವಳಕೊಂಡ ರಾಜ್ಯದಲ್ಲಿ ಮುಂದುವರೆದರು.

ಆಗ ಈ ಮುಸಲ್ಮಾನ ರಾಜ್ಯಗಳಿಗೆ ಒಳ್ಳೇ ಏರಿಕೆ. ಯಾಕಂದರೆ ಎರಡು ನೂರು ವರ್ಷಗಳಿಂದ ಪ್ರತಿಸ್ಪರ್ಧಿಯಾಗಿ ಮೆರೆಯುತ್ತಿದ್ದ ವಿಜಯನಗರ ಸಾಮ್ರಾಜ್ಯವು ಮುಕ್ತಾಯವಾಗಿತ್ತು. ಇಷ್ಟೇ ಅಲ್ಲ ಆ ಸಾಮ್ರಾಜ್ಯದ ವೈಭವ ಸಂಪತ್ತನ್ನು ಆರು ತಿಂಗಳ ವರೆಗೆ ದಿನಾಲು ನೂರಾರು ಆನೆ ಒಂಟೆಗಳ ಮೇಲೆ ಹೇರಿ ತಂದು ತಮ್ಮ ಬೊಕ್ಕಸವನ್ನು ತುಂಬಿಕೊಂಡಿದ್ದರು. ಇಂಥ ಹೇರಳವಾದ ಸಿರಿಯು ಅವರಲ್ಲಿರುವಾಗ ಆ ರಾಜ್ಯವು ಒಳ್ಳೇ ಏರಿಕೆಯಲ್ಲಿರುವದೇನಾಶ್ಚರ್ಯ!

ಇಂಥ ಸುಖಾನುಭವವುಳ್ಳ ಆ ರಾಜ್ಯವನ್ನು ದಾಟಿ ಮುಂದೆ ಪಾಳ್ಯಗಾರರು ಎಂದರೆ ವಿಜಯನಗರ ಸಾಮ್ರಾಜ್ಯದ ಪತನಾನಂತರ ಸ್ವತಂತ್ರರಾದ ಸರದಾರರ ರಾಜ್ಯವನ್ನು ಸೇರಿದರು. ಆಗ ಕರ್ನಾಟಕದ ಹಿಂದುಗಳೆಂದರೆ ಹಣ್ಣಾಗಿ ಉದುರಿದ ಎಲೆಗಳಂತೆ. ಈಗ ಮಾತ್ರ ಇವರಿಗೆ ಅಂಜಿಕೆ ದೂರವಾಯಿತು.

ಇತ್ತ ಈ ಪರಿವಾರವು ಕೆಲದಿನ ತಮಗಾದ ದುಃಖವನ್ನು ಮರೆಯುವದಕ್ಕಾಗಿ ಅಹಮ್ಮದನಗರ ರಾಜ್ಯದಲ್ಲಿ ನಿಂತುಕೊಂಡರು. ಮಳೆಗಾಲವು ಪೂರ್ಣವಾಗಿ ಮುಗಿದನಂತರ ಅಲ್ಲಿಂದ ಮುಂದೆಬಂದು ವಿಜಾಪುರ ರಾಜ್ಯವನ್ನು ಸೇರಿದರು ದಕ್ಷಿಣದಲ್ಲಿ ಈಗ ಈ ರಾಜ್ಯವೇ ಹಿರಿದು. ಆಗ ವಿಜಯನಗರದ ವಿನಾಶಮಾಡಿದ ಅಲ್ಲೀ ಆದಿಲಶಹನು ತೀರಿಕೊಂಡಿದ್ದನು. ಇಬ್ರಾಹಿಮುಶಹನು ಚಿಕ್ಕವನಿದ್ದುದರಿಂದ ಚಾಂದಬೀಬಿಯು ರಾಜ್ಯದ ವ್ಯವಸ್ಥೆ ನೋಡುತ್ತಿದ್ದಳು. ಈಕೆಯು ವಿದ್ಯಾವಂತಳು, ಧರ್ಮಿಷ್ಟಳು, ಪ್ರಜಾ ಹಿತಚಿಂತಕಳು ಆಗಿದ್ದಳು. ಅಲ್ಲದೆ ಇವಳು ಹಿಂದು ಮುಸಲ್ಮಾನ ಎಂಬ ಮತ್ಸರರಹಿತ ಸ್ವಭಾವದವಳು ಈಕೆಯ ರಾಜ್ಯವೆಂದರೆ ಆಗ ತಾಯಿಯ ರಾಜ್ಯವಾಗಿತ್ತು. ಆದ್ದರಿಂದ ಈ ಕ್ಷತ್ರಿಯರು ಮುಂದೆ ಹೋಗದೆ ಕೆಲದಿನ ಇಲ್ಲಿಯೇ ಇದ್ದುಬಿಟ್ಟರು, ಇವರಲ್ಲಿ ತಮ್ಮ ಜೀವನಕ್ಕೆ ಸಾಕಾಗುವಷ್ಟು ಸಂಪತ್ತು ಇನ್ನೂ ಇದ್ದುದರಿಂದ ಮುಂದಿನ ಯಾವ ಯೋಚನೆಯನ್ನು ಮಾಡದೆ ಅಲ್ಲಿಯೇ ವಾಸವಾದರು. ಆಗ ಇವರ ಉದ್ಯೋಗವೆಂದರೆ ಮನಸ್ಸು ಬಂದಾಗ ಬೇಟೆಯಾಡುವರು. ಮದ್ಯ ತಯಾರಿಸಿ ಮನವಾರೆ ಕುಡಿಯುವರು. ಹೀಗೆ ಸೌಖ್ಯವಾಗಿ ಕಾಲಕಳೆಯುತ್ತ ಕೆಲವರ್ಷ ಇರಲು ವಿಜಾಪುರದವರಿಗೂ ಮೊಗಲರಿಗೂ ಅಪ್ರಿಯದ ಸಂಬಂಧವಾಯಿತು. ಆಗ ಇವರು ಇಲ್ಲಿ ಇರುವದು ಹಿತಕರವಲ್ಲೆಂದರಿತು ದಕ್ಷಿಣಕ್ಕೆ ಹಿಂದೂ ರಾಜ್ಯಗಳಕಡೆಗೆ ವೇಗದಿಂದ ಬಂದರು.

ಈ ಮೊದಲೇ ಕರ್ನಾಟಕವನ್ನು ಸೇರಿದ ಪರಿವಾರವು ಹಾಳಾದ ವಿಜಯನಗರವನ್ನೊಮ್ಮೆ ನೋಡಬೇಕೆಂದು ಅತ್ತ ನಡೆದರು. ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಗಳ ವರೆಗೆ ತನ್ನ ಗಡಿಯನ್ನು ವಿಸ್ತರಿಸಿ ಜಗತ್ತಿ-

ನಲ್ಲೇ ತನ್ನ ಹೆಸರು ಮೆರೆಯಿಸಿದ. ಆ ಮಹಾನಗರವು ಇಂದು ಹಾಳಾಗಿತ್ತು, ಅನೇಕ ದೇವಾಲಯಗಳು, ಅರಮನೆಗಳು ಹಾಳಾಗಿದ್ದವು. ಅವರು ಮೊದಲು ಶ್ರೀ ಭುವನೇಶ್ವರಿಯ ಮಂದಿರಕ್ಕೆ ಹೋಗಿ ದೇವಿಯನ್ನು ಪೂಜಿಸಿ ಪ್ರಕೃತಸ್ಥಿತಿಯನ್ನು ನೆನೆದು ಪಶ್ಚಾತ್ತಾಪವಾಗಿ ನಿಟ್ಟುಸುರುಹಾಕಿದರು ಮುಂದೆ ಆನಗರವನ್ನೆಲ್ಲ ಸುತ್ತಾಡಿದರು. ಈಗ ಈ ಸಾಮ್ರಾಜ್ಯವಿರುತ್ತಿದ್ದರೆ ನಮಗೆಷ್ಟು ಹಿತವಾಗುತ್ತಿತ್ತು. ಒಮ್ಮೆಲೆ ಆಶ್ರಯವು ಸಿಕ್ಕುಬಿಡುತ್ತಿತ್ತಲ್ಲ ಎಂದು ಯೋಚಿಸುತ್ತ ನಡೆದರು.

ಈಗವರ ಮೊದಲಿನ ಕೆಲಸವೆಂದರೆ ತಮ್ಮ ಮೊದಲನೇ ಸಂಗಡದವರನ್ನು ಶೋಧಿಸುವದು. ಆದ್ದರಿಂದ ಅವರನ್ನು ಗೊತ್ತುಹಚ್ಚಬೇಕೆಂದು ಅಲ್ಲಲ್ಲಿ ಅಲೆದಾಡಹತ್ತಿದರು. ಈಗ ಕರ್ನಾಟಕವೆಲ್ಲ ಪಾಳ್ಯಗಾರರ ಬೀಡು ವಿಜಯನಗರದ ಅರಸು ಮನೆತನದವರು ಚಂದ್ರಗಿರಿಯಲ್ಲಿ ಆಳುತ್ತಿದ್ದರು. ಅಲ್ಲದೆ ಕೆಳದಿ, ಬೀಳಗಿ ಸ್ವಾದಿಗಳೂ ತಮ್ಮ ರಾಜ್ಯ ನಡೆಸಿದ್ದವು. ಮೈಸೂರಲ್ಲಿ ಯದುಕುಲದರಸರು ಇದ್ದರು. ಈ ಎಲ್ಲ ರಾಜ್ಯಗಳನ್ನು ಸುತ್ತಿದರೂ ಅವರ ಶೋಧವಾಗಲಿಲ್ಲ. ಕೊನೆಗೆ ಅವರ ಶೋಧದ ಆಶೆಬಿಟ್ಟು ಮುಂದೇನು ಎಂದು ಯೋಚಿಸಿ ಕೊನೆಗೆ ಅರಸರಲ್ಲಿ ಆಶ್ರಯಕ್ಕೆ ಹೋಗಬೇಕೆಂದು ನಿಶ್ಚಯಿಸಿ ಮೊದಲು ಕೆಳದಿ ಅರಸರನ್ನು ಕಂಡರು. ಆದರೆ ಅವರಿಗೆ ಅಲ್ಲಿ ನಿರಾಶೆಯಾಯಿತು. ತಮ್ಮ ನಿಷ್ಕಲ್ಮಷ ಉದ್ದೇಶಕ್ಕೆ ಈ ರೀತಿ ನಿರಾಕರಣೆ ಸಿಕ್ಕುವದೆಂದು ಎಣಿಸಿರಲಿಲ್ಲ. ಜಗತ್ತು ಒಳ್ಳೇದಕ್ಕೆ ಆಶ್ರಯಕೊಡುವದು ಕಡಿಮೆ. ಇದರ ರಹಸ್ಯವೇನು. ಮುಂದೆ ಕೆಲಕಾಲದ ಮೇಲೆ ಬೀಳಗಿಯಲ್ಲಿ ನೋಡಿದರು. ಅಲ್ಲಿಯೂ ಆಶ್ರಯವು ಸಿಕ್ಕದಾಯಿತು. ಎಲ್ಲೆಡೆಗೂ ನಿರಾಶೆಯಾದರೆ ತಮ್ಮ ಗತಿಯೇನು? ಹಿಂದೂ ಜನರ ಮಾನರಕ್ಷಣೆಗಾಗಿ ಹಿಂದೂ ಧರ್ಮದ ಪವಿತ್ರತೆಯನ್ನು ಕಾಪಾಡುವದಕ್ಕಾಗಿ ಕರ್ನಾಟಕವು ರಕ್ತದ ಕಾಲುವೆಗಳನ್ನು ಹರಿಸಿ ತನ್ನತನದ ಪತಾಕೆಯನ್ನು ಮೆರೆಯಿಸಿದೆ ಎಂದು ಈ ನಾಡಿನ ಕೀರ್ತಿ ಕಹಳೆಯ ಧ್ವನಿ ತಮ್ಮ ಕರ್ಣಗಳಲ್ಲಿ ಮೊಳಗುತ್ತಿತ್ತು. ಆದರೆ ಇದೇನು ಆಶ್ಚರ್ಯ ತಾವುಕೂಡ ಕೇವಲ ಆರ್ಯಧರ್ಮದ ಶೀಲ ಸ್ವಾತಂತ್ರ್ಯಗಳಿಗಾಗಿ ಎಲ್ಲವನ್ನೂ ತೊರೆದು ಅನ್ನನೀರುಗಳ ಪರಿವೆ ಇಲ್ಲದೆ ಪರ್ವತಪ್ರಾಯವಾದ ಸಂಕಟಗಳನ್ನು ಸಹಿಸಿಕೊಂಡು

ಬಂದ ಧರ್ಮ ಪ್ರೀಯರಿಗೆ ರಾಜಾಶ್ರಮವು ಸಿಗಬಾರದೆ! ಎಂದು ಯೋಚಿಸುತ್ತ ಕಾಲಕಳೆದರು. ಆದರೆ ಈ ಅರಸರ ನಿರಾಕರಣೆಗೆ ಒಂದು ಬೇರೆ ಕಾರಣವಿತ್ತು. ಅದೆಂದರೆ ದಕ್ಷಿಣದಲ್ಲಿ ಮುಸಲ್ಮಾನರ ಪ್ರಾಬಲ್ಯ ಹೆಚ್ಚು ತಾವು ಪಾಳ್ಯಗಾರರು. ಇಷ್ಟೀಗ ಸ್ವತಂತ್ರರಾಗಿ ಮುಸಲ್ಮಾನ ಅರಸರ ಕಣ್ಣಲ್ಲಿ ಒತ್ತುತ್ತಿರುವರು. ಇದಲ್ಲದೆ ಸಾಕಷ್ಟು ಶಕ್ತಿ ಸಂಚಯ ಕೂಡ ಆಗಿಲ್ಲ. ಇವರೋ! ಮೊಗಲ ಸಾಮ್ರಾಟನ ವೈರಿ ಮಹಾರಾಣಾನ ಅನುಯಾಯಿಗಳು. ಇವರಿಗೆ ಆಶ್ರಯ ಕೊಟ್ಟದ್ದನ್ನು ಆ ಸಾಮ್ರಾಟನು ಅರಿತರೆ ಆತನ ಕಣ್ಣು ತಮ್ಮ ಮೇಲೆ ಬಿದ್ದರೆ ಗತಿಯೇನು! ಎಂದು ಆಶ್ರಯ ಕೊಡಲಾರದಾದರು. ಇವರಿಗೆ ಈಗ ಹೀಗನಿಸಿತು:- ಜಗತ್ತು ವಿಶಾಲವಿದೆ. ಇನ್ನೂ ಬೇರೆ ಅರಸರಿದ್ದಾರೆ ಎಂದು ಕೊಡಿಗಗೆ ಹೋದರು. ಅಲ್ಲಿಯ ಅರಸನೂ ಇವರಿಗೆ ಆಶ್ರಯ ಕೊಡದಾದನು. ಮೈಸೂರಕಡೆ ಸಾಗಿದರು. ಆಗ ಮೈಸೂರು ಆದೇ ತನ್ನ ಉನ್ನತಿಯನ್ನು ಮೂಡಿಸುತ್ತಿರುವ ಕಾಲ. ಆಶ್ರಯವೂ ಸಿಕ್ಕಬಹುದಿತ್ತೇನೋ? ಆದರೆ ವಿಜಯನಗರದರಸರೇ ಹಿರಿದಾದ ಹಿಂದೂ ಧರ್ಮದ ಅಭಿಮಾನಿಗಳು ಎಂದು ಯೋಚಿಸಿ ಅತ್ತ ಸಾಗಿದರು

ಇವರಿಗೆ ಈಗ ತಮ್ಮ ಸ್ಥಿತಿಯು ಎಂತಹದಿದೆ. ಎಂಬ ವಿಚಾರ ಬರಹತ್ತಿತು. ಪರನಾಡು, ಪರಭಾಷೆ ಅಪರಚಿತ ರಾಜ್ಯಗಳು ತಾವೋ ಸೈನಿಕರು. ಮಹಾರಾಣಾಜಿಯವರಿಂದ ಒಂದು ಪತ್ರವನ್ನಾದರೂ ತರಲಿಲ್ಲವಲ್ಲ ಎಂದು ಚಿಂತಿಸಿದರು. ಮನುಷ್ಯರಿಗೆ ಸಂಕಟಗಳು ಬರಹತ್ತಿದರೆ ಒಂದರಹಿಂದೊಂದು ಬರುತ್ತವೆ. ಸುಖಬಂದಿತೆಂದರೆ ಸುಗ್ಗಿಯೇ ಬರುತ್ತದೆ. ಈಗ ಇವರು ಸಂಕಟಗಳ ಸೆಳವಿಗೆ ಬಿದ್ದಿದ್ದರು. ದೇವ ನಮಗಾದು ಗತಿ. ಎಂದು ದೇವರನ್ನು ನೆನಿಸುತ್ತ ಮನಸ್ಸನ್ನು ಹಗುರುಮಾಡಿಕೊಂಡು ಅಲೆದಾಡುತ್ತ ಕರ್ನಾಟಕದ ಸೊಬಗನ್ನು ನಿರೀಕ್ಷಿಸಿ ಆನಂದಪಟ್ಟಾಗ ತಮ್ಮ ದುಸ್ಥಿತಿ ಸ್ವಲ್ಪ ಮರೆಯುತ್ತಿತ್ತು.

ಕರ್ನಾಟಕದ ಆಗಿನ ದುಸ್ಥಿಯನ್ನು ನೋಡಿ ತಾವು ಕೇಳಿದ ಕನ್ನಡಿಗರ ಕಥೆಯನ್ನು ನೆನೆದರೆ ತಮ್ಮ ಅನಾಥ ಸ್ಥಿತಿಯೂ ಸ್ಮರಣೆಗೆ ಬಂದು ಹೃದಯದಲ್ಲಿ ಕೋಲಾಹಲವೇಳುತ್ತಿತ್ತು. ಚಂದ್ರಗಿರಿಯರಸರೂ ತಿರಸ್ಕರಿ

ಸಿವರೆ ತಮ್ಮ ಗತಿಯೇನು ಎಂಬಚಿಂತೆ ಬಂದಾಗ ಈ ಜಗತ್ತಿನಲ್ಲಿ ಜೀವಿಸು ವದಕ್ಕಾಗಿ ಅವರಿಗೆ ನಿರಾಶೆಯಾಗುತ್ತಿತ್ತು.

ಅವರು ಮತ್ತೆ ಯೋಚಿಸುತ್ತಿದ್ದರು- ಧರ್ಮಕ್ಕಾಗಿ ರಾಜ್ಯಗಳನ್ನು ಕಟ್ಟಿರುವೆವೆಂದು ಜಂಭಕೊಚ್ಚುವ ಈ ರಾಜ್ಯಗಳು ಸ್ವಧರ್ಮಿಯರಿಗೇ ಆಶ್ರಯನೀಡಲಿಲ್ಲವಲ್ಲ ಹೀಗೆ ಏನೇನೋ ವಿಚಾರಿಸುತ್ತ ದೂರದಾಶೆಯಿಂದ ಆಶ್ರಯವು ಸಿಗುವದೆಂಬ ನಿಶ್ಚಯದಿಂದ ಚಂದ್ರಗಿರಿಗೆ ಬಂದರು.

ಚಂದ್ರಗಿರಿಯಲ್ಲಿದ್ದವರು ವಿಜಯನಗರದ ಅರಸುಮನೆತನದವರು ಹಿಂದೂ ಧರ್ಮದ ರಕ್ಷಣೆಗಾಗಿ ಯವನರೊಡನೆ ಕಾದುಕಾದು ಪ್ರಜೆಗಳ ಹಿತಕ್ಕಾಗಿ ವ್ಯಾಪಾರ ಒಕ್ಕಲುತನಗಳನ್ನು ಊರ್ಜಿತಾವಸ್ಥೆಗೆತಂದು ಜಗತ್ತೆಲ್ಲವೂ ಅಚ್ಚರಿಗೊಂಡು ಬೊಟ್ಟು ಕಚ್ಚುವಂತೆ ಅನೇಕ ಕಟ್ಟಡಗಳನ್ನು ಕಟ್ಟಿಸಿದರು. ಸಿರಿ, ಸಂಪತ್ತು ಶೂರತನಗಳಿಂದ ಮಿಗಿಲಾಗಿ ಮೆರೆಯುತ್ತಿರುವಾಗ ಐದುಜನ ಮುಹಮ್ಮದೀಯ ಅರಸರ ಕೂಡ ಬಡೆದಾಡಿ ಲಕ್ಷಾವಧಿ ಸೈನಿಕರು ಮಡಿದ, ಎಂದೆಂದಿಗೂ ಈ ದುರಂತತೆಯ ಕರುಣಾಜನಕತೆಯುಳ್ಳ ವಿಜಯನಗರದ ಅರಸು ಮನೆತನದವರು ಇವರು ಅಲ್ಲಿಂದ ಓಡಿಬಂದು ಕೆಲಕಾಲ ಪೆನುಗೊಂಡೆಯಲ್ಲಿದ್ದರು. ಅಲ್ಲಿಯೂ ಶತೃಗಳ ಕಾಟ ಹೆಚ್ಚಾಗಲು ಚಂದ್ರಗಿರಿಗೆ ತಮ್ಮ ಸಿಂಹಾಸನ ಸಾಗಿಸಿದರು. ಆದರೇನು ರಕ್ಕಸತಂಗಡಗಿಯ ಯುದ್ಧಾನಂತರ ಇವರ ಅವನತಿಯೇ ಆಗಿತ್ತು. ಹೆಚ್ಚೇನು ಗಂಡಸತ್ತ ಅನಾಥ ಹಿಂದೂ ಮಹಿಳೆಯಂತೆ ಇವರು ದುಸ್ಥಿತಿಯಲ್ಲಿದ್ದರೂ ದೊಡ್ಡವರ ಗುಣ ದೊಡ್ಡದಲ್ಲವೆ? ಪಾಳ್ಯಗಾರರಾದರೂ ಆ ಕೆಚ್ಚು, ಆ ಅಭಿಮಾನ ಆ ವಿಚಾರಗಳುಮಾತ್ರ ಅಚ್ಚಳಿಯದೇ ಉಳಿದಿದ್ದವು. ಆದ್ದರಿಂದ ಗತಿವೀಹೀನರಾಗಿ ಅಲ್ಲಿ ಇಲ್ಲಿ ಅಲೆಯುತ್ತಿರುವ ಈ ಕ್ಷತ್ರಿಯರಿಗೆ ಆಶ್ರಯ ಕೊಟ್ಟರು ಅವರ ದುಸ್ಥಿಗೆ ಮರುಗಿ ಆಶ್ರಯವನ್ನಿತ್ತಾಗ ಅವರಿಗಾದ ಸಂತೋಷವೆಷ್ಟು ಬಲ್ಲಿರಾ?

---

# ಸೈನಿಕರು

ಎಷ್ಟೋ ಪ್ರಯತ್ನಮಾಡಿ ಯಾರಾರನ್ನೋ ಕಂಡು ಏನನ್ನೋ ಹೇಳಿಕೊಂಡು ಅರಸರಿಗೆ ಭೆಟ್ಟಿಯಾಗುವ ಬಿನ್ನಹವನ್ನು ಕಳುಹಿದರು. ಇಚ್ಛೆಯಂತೆ ಒಂದು ದಿನವೂ ನಿಶ್ಚಯವಾಗಿ ಅರಸರು ದಯೆದೋರಿ ಒಪ್ಪಿದರು. ನಿಯಮಿಸಿದ ದಿನ ಈ ಪರಿವಾರದಲ್ಲಿ ಇಬ್ಬರು ಚಾಣಾಕ್ಷರು ಭೆಟ್ಟಿಗೆ ಹೋಗುವದಕ್ಕಾಗಿ ಸಿದ್ಧರಾದರು. ಅಂದು ಬೇಗನೆ ಎದ್ದು ಸ್ನಾನಮುಗಿಸಿ ತಮ್ಮ ಕುಲದೇವತೆಯನ್ನು ಪ್ರಾರ್ಥಿಸಿದರು. ತಮ್ಮ ಯೋಗ್ಯತೆಗೆ ಒಪ್ಪುವಂತೆ ಉಡುಪುಗಳನ್ನು ಧರಿಸಿ ಎಲ್ಲರ ಅನುಜ್ಞೆಪಡೆದು ರಾಜದರ್ಶನಕ್ಕೆ ನಡೆದರು.

ಆ ಪ್ರಭಾತಸಮಯದಲ್ಲಿ ರಾಜಧಾನಿಯನ್ನು ನಿರೀಕ್ಷಿಸುತ್ತ ರಾಜಾಸ್ಥಾನಕ್ಕೆ ತಲ್ಪಿದರು. ಆ ಸಭಾಂಗಣದಲ್ಲಿ ಒಬ್ಬ ಸೇವಕನು ಇವರನ್ನು ಅಧಿಕಾರಿಯ ಆಜ್ಞೆಯಂತೆ ಒಂದು ಕಡೆಗೆ ಕರೆದೊಯ್ದನು. ಸ್ವಲ್ಪಸಮಯದ ನಂತರ ಅರಸರು ಬರುವದನ್ನು ಭಟ್ಟಂಗಿಗಳ ಹೊಗಳಿಕೆಯಿಂದ ತಿಳಿದು ಎಲ್ಲರೂ ಎದ್ದು ನಿಂತು ನಿಷ್ಠೆಯಿಂದ ನಮಸ್ಕರಿಸಿದರು. ಅರಸರು ಪ್ರಜೆಗಳ ಬಿನ್ನಹವನ್ನು ಕೇಳಿಕೊಂಡು ಕಳಿಸಹತ್ತಿದರು. ಕೊನೆಗೆ 'ಉತ್ತರ ದೇಶದ ಕ್ಷತ್ರಿಯರನ್ನು ಬರಮಾಡಿರಿ' ಎಂದು ಅರಸರ ಆಜ್ಞೆಯಾಗಲು ಸೇವಕರು ಇವರನ್ನು ಕಳುಹಿದರು. ಅವರು ಆ ಸಭಾಮಂಟಪದಲ್ಲಿ ಅರಸರಿಗೆ ಭೆಟ್ಟಿಯಾಗುವವರು ನಿಲ್ಲುವಸ್ಥಳದಲ್ಲಿ ಹೋಗಿನಿಂತರು. ತಮ್ಮ ಉತ್ತರದ ಪದ್ಧತಿಯಂತೆ ವಂದನೆಮಾಡಿ ನಿಂತರು.

ಅವರಿಗೆ ಅಂದು ಕನ್ನಡಭಾಷೆಬಾರದು. ಆದ್ದರಿಂದ ಅಚ್ಚ ಹಿಂದೀ ಭಾಷೆಯಲ್ಲಿ ಮಾತಾಡುತ್ತಿದ್ದರು. ಇವರ ಸಿಸ್ತು ಶೈಲಿಗಳು ದರಬಾರವನ್ನೇ ಮುಗ್ಧತೆಯಸಾಗರದಲ್ಲಿ ಮುಳುಗಿಸಿದವು ಆಗ ಅರಸರು ಪ್ರಶ್ನೆಮಾಡಿದರು:- ನೀವು ಧರ್ಮಾಭಿಮಾನಿಗಳಿದ್ದರೆ, ನಿಜವಾದ ಶೂರರಿದ್ದರೆ, ಕಣ್ಣುತಪ್ಪಿಸಿ ಇಲ್ಲಿಯವರೆಗೆ ಬರುವ ಅವಶ್ಯಕತೆ ಏನಿತ್ತು. ಮಹಾರಾಣಾಪ್ರತಾಪನಿಲ್ಲವೇ ಆತನು ಆಶ್ರಯಕೊಡಬಹುದಾಗಿತ್ತಲ್ಲ. ಆಗ ಕ್ಷತ್ರಿಯರು ವಿನಯಪೂರ್ವಕ ಉತ್ತರ ಹೇಳಿದರು:— ಮಹಾರಾಜ ಇಂದು ಇಡೀ ರಜಪೂತಸ್ಥಾನವೆಲ್ಲ ಮಹಾರಾಣಾಜಿಗೆ ವಿರುದ್ಧವಾಗಿ ಅವರ ಸ್ವಾಭಿಮಾನವನ್ನು ಮಣ್ಣುಗೂಡಿಸಬೇಕೆಂದು ಎಲ್ಲರೂ ಆ ಸಾಮ್ರಾಟನ ಅನುಯಾಯಿಗಳಾಗಿದ್ದಾರೆ. ಅಲ್ಲದೆ ತಮ್ಮ ಮನೆತನದ ಮಂಗಲೆಯರನ್ನು ನೀಡಿ ಬೀಗತನಮಾಡಿ ಆತನ ರಾಜ್ಯದಲ್ಲಿ ದೊಡ್ಡ ಅಧಿಕಾರಗಳನ್ನು ಪಡೆದು ಇಂದು ಆ ರಾಣಾಜಿಯನ್ನು ಅನೇಕಬಗೆಯ ಕಷ್ಟಗಳಿಗೀಡುಮಾಡಿ ಆತನ ರಾಜ್ಯವನ್ನು ಗೆದ್ದು ಪ್ರಜೆಗಳನ್ನು ಗೋಳಾಡಿಸುತ್ತಾರೆ. ಆದರೂ ಆತನು ಇವರ ಸ್ನೇಹವನ್ನು ಒಪ್ಪಲೊಲ್ಲ. ಅಡವಿಯಲ್ಲಿ ಸಿಕ್ಕಂತೆ ಅಲೆಯುತ್ತ ಶತ್ರುಗಳನ್ನು ನಿರಾಶರನ್ನಾಗಿ ಮಾಡಿದ್ದಾನೆ. ನಿಜ ಹೇಳಬೇಕಾದರೆ ಆ ಮಹಾತ್ಮನಿಗ ಇಂದು ಹೊತ್ತಿಗೆ ಸರಿಯಾಗಿ ಒಂದು ತುತ್ತು ಕೂಳುಕೂಡ ಸರಿಯಾಗ ಸಿಗುವದಿಲ್ಲ ಆದರೇನು ಆ ವೀರಾಧಿ ವೀರನು ಮೊಗಲರೊಡನೆ ಒಪ್ಪಂದಕ್ಕೆ ಒಪ್ಪಲಾರ. 'ತನ್ನ ಸಂಪತ್ತು, ಸೈನಿಕರು, ರಾಜ್ಯ, ತಾನೂ ಕೂಡ ಕೊಲ್ಲಲ್ಪಡಲಿ. ಆದರೆ ಧರ್ಮದ ಕೊಲೆಮಾಡಗೊಡಲಾರೆ' ಎನ್ನುತ್ತಿದ್ದಾನೆ. ಆ ಮಹಾನುಭಾವನು ತಾನೇ ವನವಾಸಿಯಾಗಿರುವಾಗ ಆತನಿಂದ ನಮಗೆ ಆಶ್ರಯವು ಹೇಗೆ ಸಿಗಬೇಕು. ಪ್ರಭೋ!

ಒಳ್ಳೇದು ಯಾವ ಉದ್ದೇಶಕ್ಕಾಗಿ ನೀವು ನಿಮ್ಮ ತಾಯ್ನಾಡನ್ನು ಬಿಟ್ಟು ಬಂದಿರುವಿರಿ. ಎಂದು ಅರಸನು ಪ್ರಶ್ನೆಮಾಡಿದನು.

ಈಗ ಅವರ ಮುಖವು ಗಂಭೀರವಾಯಿತು.. ಪ್ರಭೋ ಅಕಬರ ಬಾದಶಹನು ಇಂದು ರಜಪೂತಸ್ಥಾನದ ಕಣ್ಣಿಗೆಬಿದ್ದ ಸುಂದರಿಯರ ಬೇಟೆಯಾಡುತ್ತಾನೆ ಆತನ ಘನತೆಗೆ ಮೆಚ್ಚಿ ಸ್ವಾಭಿಮಾನಶೂನ್ಯರಾಗಿ ಧನ, ಅಧಿ

ಕಾರಗಳ ಆಶೆಗೆ ಆತನಲ್ಲಿ ತಮ್ಮ ಹೆಂಗಳೆಯರನ್ನು ಮುಚ್ಚುಮರೆಯಲ್ಲಿ ಕಳಿಸುತ್ತಾರೆ. ಹಾಗಾಗಬಾರದೆಂದು ನಮ್ಮಿಚ್ಛೆ; ಅದಕ್ಕಾಗಿ ಎಲ್ಲವನ್ನೂ ಕಾಲಿನಿಂದೊದ್ದು ತೊಳಲುತ್ತ ಇಲ್ಲಿಬಂದಿರುವೆವು. ಎಂದು ಉತ್ತರಕೊಟ್ಟರು.

ಆಗ ಅರಸರು ಮತ್ತೆಕೇಳುತ್ತಾರೆ- ಹಾಗಾದರೆ ನೀವು ಇಲ್ಲಿಗೆ ಬಂದು ಯಾವ ಆದರ್ಶವನ್ನು ಉಳಿಸಿದಂತಾಯಿತು. ನಿಮ್ಮನ್ನುಳಿದು ಅನೇಕರು ಅಭಿಮಾನಶೂನ್ಯರಾಗಿರುವಾಗ ನೀವು ಇಲ್ಲಿ ಒಂದು ಏನನ್ನು ಉಳಿಸಿದಂತಾಯಿತು.

ಆಗ ಆ ಕ್ಷತ್ರಿಯರು ಮತ್ತೆ ಹೇಳತೊಡಗಿದರು:- ಮಹಾಪ್ರಭೋ ಯಾವ ಆದರ್ಶವೆಂದರೆ ಏನು ಹೇಳಬೇಕು; ಲಕ್ಷಾವಧಿ ಹಿಂದೂ ವೀರರು ಯಾವ ಆದರ್ಶಕ್ಕಾಗಿ ರಕ್ತಸತಂಗಡಿಯಲ್ಲಿ ಕಾದಾಡಿ ತಮ್ಮ ಪ್ರಾಣಗಳನ್ನು ರ್ಪಿಸಿದರೋ ಇಂದು ಪೂಜ್ಯ ಪ್ರತಾಪಸಿಂಹನು ಘಾಯಗೊಂಡ ಸಿಂಹದಂತೆ ಯಾವ ಆದರ್ಶಕ್ಕಾಗಿ ಅಡವಿಯಲ್ಲಿ ಅಲೆಯುತ್ತಿರುವನೋ ಎಷ್ಟೋ ಹಿಂದೂ ರಮಣಿಯರು ಯಾವ ಆದರ್ಶಕ್ಕಾಗಿ ಜೋಹಾರಮಾಡಿ ಸ್ವರ್ಗವಾಸಿಗಳಾದರೋ ಅಂತಹದೇ ಒಂದು ಆದರ್ಶಕ್ಕಾಗಿ ನಮ್ಮ ಸ್ತ್ರೀಯರ ಶೀಲರಕ್ಷಣೆಗಾಗಿ ಹಿಂದೂತ್ವದ ಪವಿತ್ರತೆಯನ್ನುಳಿಸುವದಕ್ಕಾಗಿ ಬಂದಿದ್ದೇವೆ. ಅನಾಥನೊಬ್ಬನು ದಿಕ್ಕುಗಾಣದೆ ಅಡವಿಯಲ್ಲಿ ಅಲೆಯುತ್ತಿರುವಾಗ ಅವನಿಗೆ ಒಂದು ಸರೋವರವು ಸಿಕ್ಕಾಗ ಆತನು ಆ ಸರೋವರದ ಆಶ್ರಯದಿಂದ ತನ್ನ ಆಂಜಿಕೆಯನ್ನು ನೀಗಿ ಸಂತೋಷಗೊಳ್ಳುವದಿಲ್ಲವೆ! ಹಾಗೆ ಮಹಾಪ್ರಭುಗಳಾದ ತಾವು ನಮಗೆ ಆಶ್ರಯ ಕೊಟ್ಟು ತಮ್ಮ ಸೈನಿಕರನ್ನಾಗಿರಿಸಿಕೊಳ್ಳಬೇಕೆಂದು ಪ್ರಾರ್ಥಿಸುವೆವು. ದರಬಾರವು ಇವರ ಮಾತುಗಾರಿಕೆಯನ್ನು ಕೇಳಿ ಸಂತೋಷ ಉಕ್ಕಿತು ಅರಸರಿಗೆ ಇವರ ಅಭಿಮಾನದ ಕೆಚ್ಚನ್ನು ಕಂಡು ಮುಖದ ಮೇಲೆ ಆನಂದದತೆರೆಗಳು ಮೂಡಿದವು. ಆಗ ಅರಸರು ಹೀಗೆ ಹೇಳಿದರು:- ಮಂತ್ರಿಗಳೇ ಈ ಉತ್ತರದ ಕ್ಷತ್ರಿಯರು ವೀರತೆಯಜೊತೆಗೆ ವಾಕ್‌ಚತುರತೆಯನ್ನುಕೂಡ ಪಡೆದಿದ್ದಾರೆ. ಅಲ್ಲವೆ! ಆಗ ಮಂತ್ರಿಗಳು ಇವರಿಗಾಗಿ ಸಹಾನುಭೂತಿಯನ್ನು ತೋರಿಸಿದರು. ಕೊನೆಗೆ ಅರಸರು- ಹಾಗಾದರೆ ನೀವು ನಿಮ್ಮ ಶಸ್ತ್ರವಿದ್ಯಾಪ್ರದರ್ಶನವನ್ನು ನಮಗೆ ತೋರಿಸಬೇಕಾಗುವದು. ಎಂದು ನುಡಿಯಲು ಆ ಸರದಾರರು

ತಮ್ಮಿಷ್ಟದಂತೆ ಸಿದ್ಧರಾಗಿದ್ದೇವೆ ಎಂದು ಹೇಳಿದರು. ಆಗ ಅರಸನು ತನ್ನ ಸೇನಾನಾಯಕನಿಗೆ ಅತಿಥಿಗಳ ಆಶ್ರಮದಲ್ಲಿ ಇವರ ಎಲ್ಲ ಪರಿವಾರಕ್ಕೂ ವ್ಯವಸ್ಥೆ ಮಾಡಲು ತಿಳಿಸಿದನು ಮತ್ತು ಇವರಿಗೆ ಮುಂಬರುವ ಅಷ್ಟಮಿಯ ದಿನ ಶಸ್ತ್ರ ವಿದ್ಯಾಪ್ರದರ್ಶನಮಾಡಲು ತಿಳಿಸಿದನು ಆಗ ಕ್ಷತ್ರಿಯರು ಅಹ ಹಾ ನಿಮ್ಮ ಹೃದಯವು ಎಷ್ಟು ವಿಶಾಲವಾಗಿದೆ ಪ್ರಭೋ; ದಕ್ಷಿಣನಾಡಿನ ಎಲ್ಲ ಅರಸರು ನಮ್ಮನ್ನು ಪರದೇಶಿಗಳೆಂದು ಹೀಗಳೆದು ದೂಡಿದ್ದರು. ಆದರೆ ಕರ್ನಾಟಕ ಮಕುಟಮಣಿಗಳಾದ ತಾವು ನಮಗೆ ಆಶ್ರಯಕೊಟ್ಟಿರಿ. ಭುವನೇಶ್ವರಿಯು ತಮಗೆ ಸಂತೋಷಮಾಡಲಿ. ಎಂದು ನಮಸ್ಕರಿಸಿ ಸಂತೋಷದಿಂದ ಪುಳಕಿತರಾಗಿ ಒಬ್ಬರಮುಖವನ್ನೊಬ್ಬರು ನೋಡಿ ಮುಗುಳುನಗೆಸೂಸುತ್ತ ಬಿಸಿಲಿನತಾಪಕ್ಕೆ ಬೆಂದು ಬೆಂಡಾದ ಎಳೆಬಳ್ಳಿಗೆ ಮಳೆಯ ನೀರು ಸಿಕ್ಕಾಗ ಏರುವಕಳೆಯುಳ್ಳವರಾಗಿ ಭರಭರ ಹೆಜ್ಜೆಗಳನ್ನಿಕ್ಕುತ್ತ ಆಸಭಾಂಗಣದಿಂದ ಹೊರಟು ನಡೆದರು.

ಒಂದೊಂದಾಗಿ ದಿನಗಳು ಉರುಳಿ ನಿಯಮಿಸಿದ ದಿನವು ಸಮೀಪಿಸುತ್ತ ಕೊನೆಗೆ ಬಂದೇಬಿಟ್ಟಿತು. ಈ ಅವಧಿಯಲ್ಲಿ ಕಾಲಚಕ್ರವು ಮಂದಗತಿಯಿಂದ ಸಾಗಿದಂತೆ ಅವರಿಗೆ ಕಲ್ಪನೆ ಬರುತ್ತಿತ್ತು. ಆದರೆ ನಿಜವಾಗಿ ಕಾಲವು ತನ್ನ ನಿರ್ದಿಷ್ಟತೆಯಂತೆ ಸಾಗಿತ್ತು. ಇವರ ಉತ್ಸುಕತೆಗೆ ಹಾಗೆ ಕಲ್ಪನೆ ಬರುತ್ತಿತ್ತು. ಅಂದು ನಿಯಮಿಸಿದ ದಿನ. ಉದಯಕಾಲದ ಒಂಭತ್ತು ಗಂಟೆಗೆ ರಾಜಾಸ್ಥಾನದ ಹಿಂಬದಿಯ ಸೈನಿಕ ಶಾಲೆಯ ಹಿಂಬದಿಯಲ್ಲಿರುವ ಅಂಗಣದಲ್ಲಿ ಈ ಕ್ಷತ್ರಿಯರ ಶಸ್ತ್ರವಿದ್ಯಾಪ್ರದರ್ಶನವು ಜರುಗಬೇಕಾಗಿತ್ತು. ಅಂದು ಆಮಂತ್ರಣಹೊಂದಿದ ಅಧಿಕಾರಿಗಳು ದೊಡ್ಡ ಮನುಷ್ಯರು ಅಲ್ಲಿ ಆಸೀನರಾಗಿದ್ದರು.

ನಿಯಮಿಸಿದ ವೇಳೆಗೆ ಅರಸರು ಮಂತ್ರಿಗಳೊಡನೆ ಆಗಮಿಸಿದರು. ಭಟ್ಟಂಗಿಗಳ ಹೊಗಳು ಧನಿಕೇಳಿ ಎಲ್ಲರೂ ಎದ್ದುನಿಂತು ಮಹಾರಾಜರ ಆಗಮನವಾಗುತ್ತಲೇ ಮುಜುರೆಮಾಡಿದರು, ಮಹಾರಾಜರು ಮುಗುಳು ನಗೆಯಿಂದ ಪ್ರತಿನಮಸ್ಕಾರ ಸಲ್ಲಿಸುತ್ತ ಹೋಗಿ ಉಚ್ಚಾಸನದಲ್ಲಿ ವಿರಾಜಿಸಿ ವಿದ್ಯಾಪ್ರದರ್ಶನಕ್ಕೆ ಅಪ್ಪಣೆಕೊಟ್ಟರು. ಎಲ್ಲರೂ ಉತ್ಸುಕತೆಯಿಂದ ಅವರ ಪ್ರಯೋಗಳಗನ್ನು ನೋಡಹತ್ತಿದರು. ಖಡ್ಗವಿದ್ಯಾಪ್ರದರ್ಶನ, ತುಬಾಕಿ

ಅಶ್ವಾರೋಹಿ, ರಥಾರೂಢರು ಮುಂತಾದವುಗಳ ವಿದ್ಯಾಪ್ರಯೋಗ ನಡೆಸಿ ತೋರಿಸಿದರು. ಎಲ್ಲರೂ ಈ ಪ್ರದರ್ಶನದಿಂದ ಆನಂದಭರಿತರಾಗಿ ಚಪ್ಪಾಳೆಇಕ್ಕಿದರು. ಕೊನೆಗೆ ಕ್ಷತ್ರಿಯರೆಲ್ಲರು ಭಕ್ತಿಯಿಂದ ವಂದನೆಸಲ್ಲಿಸಿದರು. ಅರಸನು ಅವರೆಲ್ಲರನ್ನೂ ಸೈನ್ಯದಲ್ಲಿ ಸೇರಿಸಿಕೊಳ್ಳುವಮನಸ್ಸುಳ್ಳವನಾದನು. ಮಾರನೆಯದಿನ ಎಲ್ಲರೂ ಬಂದರು. ಪ್ರತಿಯೊಬ್ಬನು ಪದ್ಧತಿಯಂತೆ ರಾಜನಿಷ್ಟೆಯ ಪ್ರತಿಜ್ಞೆಮಾಡಿ ಅರಸರಹಸ್ತದಿಂದ ಆಯುಧಗಳನ್ನು ಸ್ವೀಕರಿಸಿ ನಮಸ್ಕರಿಸಿ ಒಬ್ಬೊಬ್ಬರಾಗಿ ಹೊರಟುಹೋದರು. ಇಂದು ಅವರು ತಮ್ಮ ಉದಾತ್ತ ನಿರ್ಮಲ ಉದ್ದೇಶಸಾಧನೆಯಾಗಿ ತಮ್ಮ ಧರ್ಮ ಮಾನಗಳ ರಕ್ಷಣೆಯಾದುದಕ್ಕಾಗಿ ಆನಂದಭರಿತರಾದರು. ಅವರ ಹೆಣ್ಣುಮಕ್ಕಳು ತಮ್ಮ ಹರಕೆ ಕೈಗೂಡಿತೆಂದು ಹರ್ಷಭರಿತರಾಗಿ ಪಬ್ಬಮಾಡಿ ತಮ್ಮ ದೇವತೆಗಳನ್ನು ಪೂಜಿಸಿದರು. ಅಂತೂ ಕೊನೆಗೆ ಈ ಉತ್ತರ ನಾಡಿನ ಕ್ಷತ್ರಿಯರು ದಕ್ಷಿಣದಲ್ಲಿ ಕನ್ನಡ ಅರಸರಲ್ಲಿ ಸೈನಿಕರಾಗಿ ಇದ್ದು ಕೊನೆಗೆ ಕೆಲಕಾಲದ ನಂತರ ಇಲ್ಲಿಯ ಜನರ ಭಾಷೆ ಬಾಳ್ವೆಗಳಲ್ಲಿ ಬೆರೆತು ತಮ್ಮ ದೇಶವನ್ನೇ ಮರೆತರು.

ಇತ್ತ ಅಹಮ್ಮದನಗರ ರಾಜ್ಯದಲ್ಲಿ ಮತ್ತೊಂದು ಗುಂಪು ಅಲ್ಲಿಯೇ ಸುಖವಾಗಿ ತಮ್ಮಲ್ಲಿದ್ದ ಸಂಪತ್ತನ್ನು ವೆಚ್ಚಮಾಡುತ್ತ ಕಾಲಕಳೆಯುತ್ತಿರಲು ಮೊಗಲರು ಆ ರಾಜ್ಯವನ್ನು ಮುತ್ತಿಗೆಹಾಕಿದರು ಇದನ್ನರಿತ ಇವರು ತಾವುಬಂದ ಕೆಲಸವೇನು? ಎಂಬುದನ್ನು ಮರೆತು ರಕ್ತಹೀರುವ ತಗಣೆಗಳಂತೆ ವಿಲಾಸಿ ಜೀವನವನ್ನು ನಡೆಸುತ್ತಿರುವದೇನು? ಎಂದು ನಾಚಿ ತಮ್ಮ ಇರವು ಮೊಗಲರಿಗೆ ತಿಳಿದರೆ ತಮ್ಮ ಗತಿಯೇನು ಎಂದು ತಳಕಿತ್ತು ಕರ್ನಾಟಕಕ್ಕೆ ಬಂದರು. ಆಗ ಆದೇ ಉದಯಿಸಿ ಬೆಳಗುತ್ತಿದ್ದ ಮೈಸೂರನ್ನು ಸೇರಿ ಅರಸರನ್ನು ಕಂಡು ಅವರಲ್ಲಿಯೇ ಸೈನಿಕ ವೃತ್ತಿಯನ್ನು ಸಂಪಾದಿಸಿ ಕಾಲ ನೂಕುತ್ತಿರುವಾಗ ಅವರಿಗೆ ಎಷ್ಟು ಹರ್ಷಹುಮ್ಮಸಗಳು ಬಲ್ಲಿರಾ? ಇದೀಗ ಕ್ಷತ್ರಿಯರೆಂದರೆ ಬೇನೆಯಿಂದ ಅಂಧನಾದವನಿಗೆ ಈಶ್ವರೀ ಕೃಪೆಯಿಂದ ನೇತ್ರುಗಳು ಪ್ರಕಾಶವನ್ನು ಕಂಡುಹಿಡಿದಂತೆ ಸಂತೋಷವಾಗಿದೆ. ಇವರೇ ಇಂದು ಕರ್ನಾಟಕದ ಅತಿ ಹಿಂದುಳಿದ ಅಲ್ಪಸಂಖ್ಯಾಕರರಾಗಿರುವ ಕಲಾಲರೆಂದು ಕರೆದುಕೊಳ್ಳುವ ಸೂರ್ಯವಂಶ ಕ್ಷತ್ರಿಯರು.

# ಅವನತಿ

ಅನೇಕ ಸಂಕಟಗಳನ್ನೆದುರಿಸಿ ಪಾರಾಗಿಬಂದು ಕನ್ನಡ ನಾಡಿನ ಸೈನಿಕರಾಗಿದ್ದ ಈ ಕ್ಷತ್ರಿಯರದೊಂದು ಚಿಕ್ಕ ಗುಂಪೇ ಆಯಿತು. ದಿನಗಳು ಮಾಸಗಳು ಕೊನೆಗೆ ವರ್ಷಗಳೆಷ್ಟೋ ಸಂದವು. ಅರಸರೆಷ್ಟೋ ಕಾಲ ರಾಜ್ಯವಾಳಿ ಕೊನೆಗೆ ಕಾಲನನ್ನು ಕೂಡಲು ಅವರ ಮಕ್ಕಳು ಅರಸರಾಗುವಂತೆ ಇವರು ಕಾಲವಾದಂತೆ ಇವರ ಮಕ್ಕಳು ತಮ್ಮ ಹಿರಿಯರ ಸ್ಥಾನವನ್ನು ಗಳಿಸುತ್ತಿದ್ದರು ಸುಮಾರು ಹದಿನೇಳನೇ ಶತಮಾನದ ಮಧ್ಯದಲ್ಲಿ ಚಂದ್ರಗಿರಿಯ ಅರಸುಮನೆತನದಲ್ಲಿ ಗೃಹಕಲಹವೆದ್ದಿತು. ವೆಂಕಟಪತಿರಾಯರು ಸಾಯುವಾಗ ಚಿಕ್ಕರಾಯನು ಪಟ್ಟಬಾಧ್ಯನಲ್ಲ ಆದಕಾರಣ ರಂಗರಾಯನು ಅರಸನಾಗಬೇಕು. ಎಂದು ಶಾಸನಮಾಡಿದ್ದರು ವೆಂಕಟಪತಿರಾಯರ ಶಾಸನವನ್ನು ಕೃತಿಯಲ್ಲಿ ತರಲು ಎಚ್ಚಮನಾಯಕನೇ ಮೊದಲಾದ ರಾಜನಿಷ್ಠ ಸರದಾರರು ಶೂರರು ಒಂದಾದರು. ವೆಂಕಟಪತಿರಾಯರ ಪತ್ನಿಯು ತನ್ನ ಮಗನೇ ರಾಜ್ಯಾಧಿಕಾರಿಯೆಂದು ಸಾಧಿಸಹತ್ತಿದಳು. ಆದಕ್ಕಾಗಿ ಅವಳು ತನ್ನ ತಂದೆ ಜಗದೇವನನ್ನು ತನ್ನ ಪಕ್ಷಕ್ಕೆ ಕೂಡಿಸಿಕೊಂಡಿದ್ದಳು ಎರಡೂ ಪಕ್ಷಗಳಲ್ಲಿ ಭಯಂಕರ ಘರ್ಷಣೆಯಾಗಿ ಕೋಲಾಹಲವೇಳತೊಡಗಿತು. ಆಗ ವೆಂಕಟಪತಿರಾಯರ ಅಪ್ಪಣೆಗೆ ವಿರುದ್ಧವಾಗಿ ಚಿಕ್ಕರಾಯನನ್ನು ಅರಸನನ್ನಾಗಿ ಮಾಡಿದರು. ನಿಜವಾಗಿಯೆಂದರೆ ಆ ಕೂಸು ವೆಂಕಟಪತಿರಾಯರದಾಗಿರದೆ ಎಲ್ಲಿಂದಲೋ ಗುಪ್ತವಾಗಿ ಕೊಂಡು ತಂದುದಿತ್ತು. ಮತ್ತು ಆತನಲ್ಲಿ ಅರಸನಾಗುವ ಯೋಗ್ಯತೆಯೂ ಇರಲಿಲ್ಲ. ಚಾಣಾಕ್ಷನಾದ ಎಚ್ಚಮನಾಯಕನು ಚಿಕ್ಕರಾಯನ ಜನನದ ಶೋಧಕ್ಕಾಗಿ ಪ್ರಯತ್ನಿಸಹತ್ತಿ

ದನು ಅದಕ್ಕಾಗಿ ತನ್ನ ಬುದ್ಧಿವಂತಿಕೆಯಿಂದ ಸಂಶಯವನ್ನು ಎಲ್ಲರ ಮೇಲೂ ಪರಿಣಾಮಕಾರಿಯಾಗುವಂತೆ ಪ್ರಯೋಗಿಸಿದನು. ಈ ಸುಳುವು ಜಗದೇವನಿಗೆ ತಿಳಿದು ಕಾರಣವಿಲ್ಲದೆ ಸಂಶಯಬಂದ ನಿರಪರಾಧಿ ರಾಜನಿಷ್ಟ ರನ್ನು ಸೆರೆಹಿಡಿಯಹತ್ತಿದನು. ಆಗ ಎಲ್ಲರಿಗೂ ಜಗದೇವರಾಯನು ಏನ ನ್ನೋ ಮುಚ್ಚುವದಕ್ಕಾಗಿ ಪ್ರಯತ್ನಿಸುತ್ತಿರುವನೆಂದು ಸಂಶಯಗೊಂಡು ಒಬ್ಬೊಬ್ಬರೇ ಆತನ ಆಜ್ಞೋಲ್ಲಂಘನ ಮಾಡಹತ್ತಿ ಕೊನೆಗೆ ಎಚ್ಚಮನ ಪಕ್ಷವನ್ನು ಸೇರಹತ್ತಿದರು ಈ ಪ್ರಸಂಗವು ಈ ಕ್ಷತ್ರಿಯರಮೇಲೂ ಬಂದಿತು. ಇವರು ಜಗದೇವನ ಆಜ್ಞೆಯನ್ನೂ ಪಾಲಿಸಲಿಲ್ಲ, ಎದುರುಪಕ್ಷವನ್ನೂ ಸೇರಲಿಲ್ಲ. ಅವರಿಗೆ ಇದಾವುದೂ ಬೇಡವಾಗಿ ತಮ್ಮ ವಂಶಕುಲಗಳಿಂದ ಪರಂಪರಾಗತವಾಗಿ ನಡೆದುಬಂದ ವೃತ್ತಿಗೆ ನಿರ್ವಾಹವಿಲ್ಲದೆ ಶರಣುಹೊಡೆದು ಶಸ್ತ್ರಗಳನ್ನು ಕೆಳಗಿಟ್ಟು ಕನ್ನಡ ಸಿಂಹಾಸನದ ಸೇವೆಯಿಂದ ನಿವೃತ್ತರಾಗಿ ಬೇರಬೇರೆ ಕಡೆಗೆ ಹೊರಟುಹೋಗಿ ಅಲ್ಲಲ್ಲಿ ಇರಹತ್ತಿದರು

ಇತ್ತ ಮೈಸೂರಲ್ಲಿದ್ದವರೂ ರಾಜನಿಷ್ಟರಾಗಿ ಸೇವೆ ಮಾಡುತ್ತ ಹಾಯಾಗಿ ಕಾಲಕಳೆಯುತ್ತಿದ್ದರು. ಮೈಸೂರರಸರು ಸಂದುಹೋಗಿ ಹೈದರಾಲಿ ಆಳಹತ್ತಿದನು, ಆತನತರುವಾಯ ಟೀಪೂನಾಳಿಕೆ ಬಂದಿತು. ಇವನು ಮುಸಲ್ಮಾನ ಧರ್ಮದ ಕಟ್ಟಾ ಅಭಿಮಾನಿ. ತನ್ನ ಕತ್ತಿಯಬಲದಿಂದ ರಾಜ್ಯ ಬೆಳೆಯುವ ಜೊತೆಗೆ ಅದು ಇಸ್ಲಾಂಮಯವಾಗಿರಬೇಕೆಂಬ ಹಂಬಲವುಳ್ಳವನಾಗಿದ್ದನು. ಅರಸನ ಈ ಮನೋವೃತ್ತಿಯು ಕುಹಕರಾದ ಕೆಲ ಅಧಿಕಾರಿಗಳಿಗೆ ತಮ್ಮ ಸ್ವಾರ್ಥದಾಟಸಾಗಿಸಲು ಅನುವುಮಾಡಿಕೊಟ್ಟಿತು. ಅದಕ್ಕಾಗಿ ಅವರು ಸೆರೆಸಿಕ್ಕ ಆ ಸೈನಿಕರನ್ನು ಪ್ರಜೆಗಳನ್ನು ಮುಸಲ್ಮಾನರನ್ನಾಗಿ ಮಾಡುತ್ತಿದ್ದರು.

ಜಗತ್ತಿನಲ್ಲಿ ಯಾವಸಂಸ್ಕೃತಿಯೇ ಇರಲಿ. ಧರ್ಮವೇ ಇರಲಿ. ಅದು ಬಾಳಿ ಬದುಕಲು ರಾಜಾಶ್ರಯವು ಅತ್ಯಂತ ಅವಶ್ಯವಾದದ್ದು. ಅರಸನು ತನ್ನ ಪ್ರಜೆಗಳನ್ನು ಮಕ್ಕಳಂತೆ ಕಂಡು ಅವರವರ ಧರ್ಮ ನೀತಿಗಳು, ಅವರವರಿಗೆ ಪ್ರಿಯವಾದವು. ಎಂಬ ಉದಾರಧೋರಣೆಯುಳ್ಳವನಾದರೆ ಮಾತ್ರ ಅವು ಉಳಿಯುವವು. ಆದರೆ ಅರಸನು ತಮ್ಮಧರ್ಮದ ಪಂಥಗಳೇ

ಯೋಗ್ಯ. ಅವುಗಳನ್ನೇ ಎಲ್ಲರೂ ಒಪ್ಪಬೇಕೆಂಬ ದುರಾಗ್ರಹವುಳ್ಳವನಾದರೆ ಉಳಿದವರ ನೀತಿ ಧರ್ಮಗಳು ಮರಳಿನಲ್ಲಿಯ ಮನೆಗಳಂತೆ ಉದುರಿಬೀಳುವವು ಆ ರಾಜನ ಅಧಿಕಾರಿವರ್ಗವು ತಮ್ಮ ಆಳಿಕೆಯಲ್ಲಿ ಇಂಥ ಕೆಲಸಗಳೆಷ್ಟೋ ಮಾಡಿತು ಆಗ ಅಲ್ಲಲ್ಲಿ ಸಣ್ಣ ಅರಸರು ಕಣ್ಣಲ್ಲಿ ಜೀವ ಹಿಡಿದ ರೋಗಿಗಳಂತೆ ಬಾಳುತ್ತಿದ್ದರು. ಅವರೆಲ್ಲರಮೇಲೆ ದಾಳಿಯಿಟ್ಟು ನಗರಗಳನ್ನು ಸುಲಿದು ಸೂರೆಮಾಡಿದರು ಆಗ ಅಧಿಕಾರಿಗಳು ಕೈಗೆಸಿಕ್ಕವರನ್ನು ಬಲಾತ್ಕಾರದಿಂದ ಮುಸಲ್ಮಾನರನ್ನಾಗಿ ಮಾಡುತ್ತಿದ್ದರು. ಹೀಗೆ ಈ ಅರಸನ ಅರಸೊತ್ತಿಗೆಯು ಉಪಯೋಗವಾಗುತ್ತಿರಲು ಆತನ ಆಶ್ರಯದಲ್ಲಿ ಸೇವಕರಾಗಿದ್ದವರಪಾಡೇನು? ಯಾವಕಾರಣದಿಂದಲೋ ಈ ಕ್ಷತ್ರಿಯರು ಉತ್ತರದೇಶದವರೆಂದೂ ಅಲ್ಲಿಂದ ಓಡಿಬಂದವರೆಂದೂ ಅಧಿಕಾರಿಗಳಿಗೆ ತಿಳಿಯಿತು. ಅವರು ಇವರಿಗೆ ಮುಸಲ್ಮಾನರನ್ನಾಗಲಿಕ್ಕೆ ಉಪದೇಶ ಮಾಡಿದರು. ಆವರೆ ಅವರು ಒಪ್ಪದೆ ಇಲ್ಲಿದ್ದರೆ ಇನ್ನು ತಮ್ಮ ಗತಿ ನೆಟ್ಟಗಾಗದೆಂದು ತಿಳಿದು ಓಡಿಹೋಗಲು ಪ್ರಯತ್ನಮಾಡಿದರು. ಅಧಿಕಾರಿಗಳು ಆಗ ಅವರನ್ನು ಹಿಡತಂದು ಟೀಪೂಸುಲ್ತಾನನ ಎದುರಿನಲ್ಲಿ ಇಲ್ಲದ್ದೊಂದು ಹೇಳಿ ಅಪರಾಧಿಗಳೆಂದು ಸಿದ್ಧಮಾಡಿವರು. ಮತ್ತು ಅವರನ್ನು ಸೆರೆಯಲ್ಲಿಡಲು ಆಜ್ಞೆಮಾಡಿದರು. ಆಗಲೂ ಮತ್ತೆ ತಲೆಮರಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡಲು ಸಿಟ್ಟು ಬೆಂಕಿಯಾಗಿ ಆವರನ್ನು ಬಲಾತ್ಕಾರದಿಂದ ಸುಲ್ತಿ ಮಾಡಿ ಸಿಬಿಟ್ಟರು.

ಆದರೂ ಈ ಸ್ವಾಭಿಮಾನಿಗಳು ಸುಲ್ತಿಮಾಡಿಸಿದರೂ ಮುಸಲ್ಮಾನರಾಗಲಾರೆವು. ಎಂದು ಎದುರಾಡಿದರು ಆಗ ಇವರನ್ನು ಮುಸಲ್ಮಾನರಾಗಲಿಕ್ಕೆ ಒಪ್ಪುವವರೆಗೂ ಮತ್ತೆ ಸೆರೆಮನೆಯಲ್ಲಿ ಹಾಕಿಬಿಟ್ಟರು ಇವರ ಅಧಿಕಾರಿಗಳು ಇವರಿಗೆ ಇಲ್ಲದ್ದೊಂದು ಆಶೆ ತೋರಿಸಿದರೂ ಚಿತ್ರವಿಚಿತ್ರ ಹಿಂಸೆಯನ್ನು ಕೊಟ್ಟರೂ ಇವರು ಒಪ್ಪಲಿಲ್ಲ ಅವರು ತಮ್ಮ ಅರಸಿನ ದರ್ಪದ ಹೆಸರಿನಲ್ಲಿ ರಾಜ್ಯಗಳೆಷ್ಟೋ ಮಣ್ಣುಪಾಲಾಗುತ್ತಿರಲು ತಮ್ಮ ಪ್ರೀತಿಸಂಪಾದನೆಗಾಗಿ ಎಷ್ಟೋ ಜನರು ಮುಂದೆ ಬಂದು ತಮ್ಮ ಇಸ್ಲಾಂ ಧರ್ಮ ಸ್ವೀಕರಿಸುತ್ತಿರಲು "ನಿಮ್ಮ ಬಲಾತ್ಕಾರಕ್ಕೆಬಗ್ಗಿ ನಮ್ಮ ಧರ್ಮ ಬಿಡಲಾರೆವು." ಎನ್ನುವ ಈ ವಿಚಿತ್ರ ಜನರನ್ನು ನೋಡಿ ಅಚ್ಚರಿಗೊಂಡರು. ಅಕಬರನಂಥ

ಚಾಣಾಕ್ಷನ ಅನುಯಾಯಿಗೆ ಬಗ್ಗದವರು ಈ ವೀರಾಧಿವೀರನ ಅಧಿಕಾರಿಗೆ ಬಗ್ಗಿಯಾರೆ ?

ಲಕ್ಷ್ಮೀದೇವಿ ಬಲುಚಂಚಲೆಯು. ಟೀಪೂಸುಲ್ತಾನನು ಎಲ್ಲ ವೈರಿಗಳನ್ನು ಬಡಿದುಹಾಕಿ ತನ್ನ ರಾಜ್ಯವನ್ನು ಬೆಳಿಸುತ್ತಿರಲು ಇವನನ್ನು ಮುರಿಬಡೆಯಲು ಇತ್ತ ಮರಾಠರು ಅತ್ತ ನಿಜಾಮನು ಮತ್ತೊಂದತ್ತ ಇಂಗ್ಲೀಷರು ಹವಣಿಕೆಹಾಕಿ ಒಬ್ಬೊಬ್ಬರೇ ಇವನನ್ನು ಸೋಲಿಸುವದಾಗದೆ ಯೋಚನೆಗೊಳಗಾಗಿದ್ದರು ತಮ್ಮಿಂದ ಟೀಪೂನನ್ನು ಸೋಲಿಸುವದಾಗಲೀ, ಸೆರೆಹಿಡಿಯುವದಾಗಲೀ ಶಕ್ಯವಿಲ್ಲ ಆದಕ್ಕಾಗಿ ಏನುಮಾಡಬೇಕು. ಎಂದು ಯೋಚಿಸುತ್ತಿದ್ದರು. ಅಂತಹ ಆದರ್ಶ ವೀರನಿದ್ದ ಟೀಪೂ; ಅಂತೆಯೇ ಇವನನ್ನು ಇತಿಹಾಸಕಾರರು 'ಮೈಸೂರ ಹುಲಿ' ಎಂದು ಹೊಗಳಿದ್ದಾರೆ.

ಸಿರಿದೇವಿ ಟೀಪೂನಲ್ಲಿಂದ ಪಲಾಯನಮಾಡಲು ಸಿದ್ಧಳಾದಳು. ಇವರೆಲ್ಲಕೂಡಿ ಟೀಪೂನನ್ನು ಮುರಿಯಲು ಹೊಂಚುಹಾಕುತ್ತಿದ್ದಾಗ ಟೀಪೂನು ಇಂಗ್ಲೀಷರನ್ನು ಇಂಗ್ಲಂಡಕ್ಕೆ ಅಟ್ಟಬೇಕೆಂದು ಹೊಂಚುಹಾಕುತ್ತಿದ್ದನು. ಮರಾಠರು, ಇಂಗ್ಲೀಷರು, ನಿಜಾಮನು ಒಂದಾಗಿ ಶ್ರೀರಂಗಪಟ್ಟಣದ ಮೇಲೆ ದಾಳಿ ಇಟ್ಟರು. ಆ ಭಯಂಕರವಾದ ಕಾಳಗದಲ್ಲಿ ಜಯಲಕ್ಷ್ಮಿಯು ಟೀಪುನನ್ನು ತೊರೆದು ಇಂಗ್ಲೀಷರಿಗೆ ಮಾಲೆಹಾಕಿದಳು. ಆ ಧರ್ಮಾಭಿಮಾನಿಯು ತನ್ನ ಧರ್ಮ ಬೆಳಿಸಬೇಕೆಂಬ ಆಶೆಯಲ್ಲಿಯೇ ಕೊನೆಗಂಡನು.

ಯುದ್ಧ ಮುಕ್ತಾಯವ ನಂತರ ಸೆರೆಮನೆಗಳಿಂದ ಎಷ್ಟೋ ಕೈದಿಗಳು ಬಿಡಲ್ಪಟ್ಟಾಗ ಅವರಲ್ಲಿ ಸೆರೆಯಾದ ಈ ಕ್ಷತ್ರಿಯರೂ ಇದ್ದರು ಅವರೂ ತಮ್ಮ ಕೈಕೊಳಗಳಿಂದ ಬಿಡುಗಡೆಯಾಗಿ ಯಾರಿಗೂ ಅರಿಯದಂತೆ ನಾಚಿ ಎತ್ತೆತ್ತಲೋ ಹೊರಟುಹೋದರು. ಅಂದಿನಿಂದ, ಅವರು ಸೈನಿಕ ವೃತ್ತಿಯನ್ನು ತ್ಯಜಿಸಿ ಅಜ್ಞಾತರಾಗಿದ್ದರು, ಇವರೇ ಇಂದು ಕರ್ನಾಟಕದಲ್ಲಿದ್ದ ಮುಸ್ಲಿಂ ಕಲಾಲರು.



# ವ್ಯವಸಾಯಿಗಳು

ಧರ್ಮಾಭಿಮಾನದಿಂದ ಕೇವಲ ಪವಿತ್ರತೆಯ ಕಲ್ಪನೆಯಿಂದ ಆಕಬರನಂಥ ವೀರಾಧಿವೀರಚಾಣಾಕ್ಷ ಬಾದಶಹನ ಮಾಂಡಲಿಕನಿಗೊಲಿಯದೆ ಇದ್ದ ಸುಖಗಳನ್ನೆಲ್ಲ ಬಿಸಾಕಿ ಅಡವಿಯಲ್ಲಿ ಅಲೆದಾಡಿ ಕಣ್ಣುತಪ್ಪಿಸುತ್ತ ಕೈಗೆ ಸಿಕ್ಕದೆ ದಾರಿಯಲ್ಲಿ ಅಲರಿಸಿದ ಸಂಕಟಗಳನ್ನನುಭವಿಸಿ ಮುಸಲ್ಮಾನ ರಾಜ್ಯಗಳನ್ನು ದಾಟಿ ಚಿಕ್ಕವಿದ್ದರೂ ಚಿಂತೆಯಿಲ್ಲ. ಎಂದು ಹಿಂದೂ ರಾಜ್ಯಗಳಲ್ಲೇ ಅಭಿಮಾನದಿಂದ ಜೀವನಯಾತ್ರೆ ಸಾಗಿಸುತ್ತಿರಲು ಎರಡು ಶತಮಾನಗಳಷ್ಟು ಅವಧಿಯಲ್ಲಿ ಇಂಥ ಭಯಂಕರ ಸಂಕಟ ಒದಗಬೇಕೇ?

ಸೆರೆಮನೆಯಿಂದ ಬಿಡುಗಡೆಯಾಗಿ ಬರುವಷ್ಟರಲ್ಲಿ ಜೊತೆಗಾರರೆಲ್ಲ ಎಲ್ಲೆಲ್ಲೋ ಪಲಾಯನಮಾಡಿದ್ದರು. ಈಗ ಇವರ ಮುಂದಿನಕಾರ್ಯವೆಂದರೆ ತಮ್ಮ ಜನರ ಶೋಧಮಾಡುವದು. ಅಲ್ಲಲ್ಲಿ ಹುಡುಕಿ ಕೊನೆಗೆಕಂಡರು. ತಮ್ಮವರನ್ನು ಕಾಣುವದಕ್ಕಿಂತ ಮೊದಲು ಒಂದು ಕಲ್ಪನೆಯಿತ್ತು. ಟೀಪೂನಂಥ ಬಲಶಾಲಿಯ ಕೈಯಲ್ಲಿ ಸಿಕ್ಕರೂ ಮುಸಲ್ಮಾನ ಧರ್ಮ ಸ್ವೀಕರಿಸಲಿಲ್ಲ. ತಮ್ಮ ಧೈರ್ಯ, ಧ್ಯೇಯಸಾಧನೆ ಧರ್ಮಾಭಿಮಾನಗಳಿಗಾಗಿ ತಮ್ಮವರು ತಮ್ಮನ್ನು ಆದರದಿಂದ ಕಾಣಬಹುದು ಎಂದರು. ಆದರೆ ಕಲ್ಪನೆಯು ಕುಸಿದುಬಿತ್ತು. ಹೆಂಡರು, ಮಕ್ಕಳು ಮಾತ್ರ ನಿರ್ವಾಹವಿಲ್ಲದೆ ಇವರನ್ನು ಕೂಡಿಕೊಂಡರು. ಆಗ ಇವರು ಸಂಶಯನಿವಾರಣೆಗಾಗಿ ನಿಜ ಸಂಗತಿಯನ್ನು ನಿವೇದಿಸಿದರು. ಆದರೆ ಅವರು ಮುಸಲ್ಮಾನಧರ್ಮ ಸ್ವೀಕರಿಸದಿದ್ದರೇನು? ಸುಲ್ತಿಯಾಗಿರುದಲ್ಲ. ವಿಧಾನವಾಗದಿದ್ದರೂ ಆಧಾರಯುಕ್ತ ದೇಹವು ಅಂತರ್ಯ್ಹಹೊಂದಿರುವದು. ಎಂದು ಹೀಯಾಳಿಸಿದರು.

ಆಗ ಅವರು ತಮ್ಮ ಜನರಕೂಡ ಬಹು ವಿಧವಾಗಿ ವಾದಿಸಿದರು. ಘರ್ಷಣೆಯಾಗಿ ಕೊನೆಗೆ ನಾಡಿನಲ್ಲಿಯ ಎಲ್ಲ ಸ್ವಜಾತಿ ಬಾಂಧವರನ್ನು ಕೂಡಿಸಿ ಒಂದು ನಿರ್ಧಾರಕ್ಕೆ ಬಂದು ಅದರಂತೆ ನಡೆಯಬೇಕೆಂದು ನಿರ್ಧರಿಸಿದರು. ಅದಕ್ಕಾಗಿ ತಮ್ಮ ಎಲ್ಲ ಜನರಿಗೂ ಈ ಕಾರ್ಯಕ್ಕೆ ಬರಬೇಕೆಂದು ಹೇಳುತ್ತ ಹೊರಟಿರಲು ಚಂದ್ರಗಿರಿಯಿಂದ ಹೊಲೆಬಿದ್ದವರದೂ ಪರಿಚಯ ವಾಯಿತು. ಅವರೆಲ್ಲರೂ ಆಗ ನಾಲ್ಕೈದು ಕುಟುಂಬಗಳು ಕೂಡಿ ತಮಗೆ ಅನುಕೂಲವಾದ ಸ್ಥಳಗಳಲ್ಲಿದ್ದುಕೊಂಡು ಇಲ್ಲಿಯ ಜನರಿಗೆ ಹೊಸದಾದ ಒಂದು ಉದ್ಯೋಗ ಪ್ರಾರಂಭ ಮಾಡಿದ್ದರು. ಅದೆಂದರೆ ತಮಗೆ ಪರಿಚಿತ ಹಾಗು ಪ್ರಿಯವಾದ ಮಧ್ಯವನ್ನು ತಯಾರಿಸಿ ವಿಲಾಸಿ ಜನರಿಗೆ ಅಗ್ಗದರದಲ್ಲಿ ಮಾರಿ ತಮ್ಮ ಜೀವನಸಾಗಿಸಿದ್ದರು. ಅನೇಕ ಸಂಗತಿಗಳ ವಿಚಾರದಿಂದ ತಾವೆಲ್ಲ ಒಂದೇ ಧರ್ಮದವರೂ ಒಂದೇ ದೇಶದವರು ಎಂದರಿತು ಸಂತೋಷಪಟ್ಟರು.

ಟೀಪೂನ ಕೈಯಲ್ಲಿ ಸಿಕ್ಕಜನರ ವಿಚಾರಣೆಯಲ್ಲಿ ಇವರೂ ಬಂದು ಸೇರಿದರು. ವಿಚಾರಣೆ ನಡೆಯಿತು. ಮನಸೊಪ್ಪದಿದ್ದರೇನು? ವಿಧಾನವಾಗದಿದ್ದರೇನು? ದೇಹದಮೇಲೆ ಪ್ರತ್ಯಕ್ಷ ಧರ್ಮದ ಕುರುಹು ಇವೆ. ಆದ ಕಾರಣ ತಮ್ಮ ಧರ್ಮದಿಂದ ಬೇರೆಯಾದವರು ಎಂದು ಹೇಳಿದರು ಆಗ ಅವರ ಎದೆಒಡೆದು ನೀರಾಯಿತು. ಎಷ್ಟೋ ವರ್ಷಗಳಿಂದ ರಕ್ಷಿಸಿಕೊಂಡು ಬಂದ ತಮ್ಮ ಪ್ರಾಚೀನಕಾಲದ ಧರ್ಮದಿಂದ ಅನ್ಯಾಯವಾಗಿ ಬೇರೆಯಾಗುವದಲ್ಲ ಎಂದು ವಾದಮಾಡಿದರು. ಕೇಳಲಿಲ್ಲ. ಅವನತಿಯು ಇವರನ್ನು ಆವರಿಸಲು ಸಿದ್ಧವಾಗಿತ್ತು. ಎಂಥ ಸಂಕಟದಲ್ಲಿ ಸಿಕ್ಕಿದ್ದರೂ ಎಂಥ ಅವಹೇಳನೆಯಾಗಿದ್ದರೂ ಯಾರೂ ಅನುಭವಿಸದಷ್ಟು ಯಾತನೆಗೊಂಡಿದ್ದರೂ ಅವರು ಹೆದರಲಿಲ್ಲ ಆದರೆ ಈಗ ತಮ್ಮ ಧರ್ಮದವರು ಕೈಬಿಡುವದನ್ನು ನೋಡಿ ಎಂದೂಆಗದಷ್ಟು ದುಃಖವಾಯಿತು. ಅವರ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವಾಗಿ ತಮ್ಮ ಭಾವೀ ಜೀವನವು ಅವರಿಗೆ ಭಯಾನಕವಾಯಿತು. ಕೆಲವುಕಾಲದ ಹಿಂದೆ ಮೈಸೂರ ಹುಲಿಯ ದರ್ಪದ ಅಧಿಕಾರಿಗಳ ಮುಂದೆ ಸ್ವಾಭಿಮಾನದ ಬಲದಿಂದ ಬಗ್ಗಲಾರದ ಇವರು ತಮ್ಮ ಧರ್ಮದಮೇಲೆಯೇ ತಮ್ಮ ಜೀವನವನ್ನು ಸಾಗಿಸುವೆವೆಂಬ ಆತ್ಮವಿಶ್ವಾಸದ ಇವರು ಪವಿತ್ರ

ವಾದ ಹಿಂದೂಧರ್ಮದವರು ನಾವು ನಮ್ಮ ಧರ್ಮವೇ ಶ್ರೇಷ್ಟ, ಎಂದು ಪರ ಧರ್ಮದ ಅರಸನಿಗೆ ಅಚ್ಚರಿಗೊಳಿಸಿದ ಇವರು ಹಾಗೂ ಈಗ ತಮ್ಮ ಧರ್ಮ ಬಂಧುಗಳೇ ದೇಹದಿಂದ ಬದಲಾವಣೆಹೊಂದಿರುವಿರಿ ಆದ್ದರಿಂದ ನಿಮ್ಮ ನ್ನು ನಮ್ಮ ಧರ್ಮದಲ್ಲಿರಿಸಿಕೊಳ್ಳಲಿಕ್ಕೆ ಬರುವದಿಲ್ಲ. ಎಂಬುದನ್ನು ಕೇಳಿದ ಇವರು ಈಗ ಇವರ ಆ ಸ್ವಾಭಿಮಾನವು ಅನ್ಯಾಯದಿಂದ ತುಳಿಯಲ್ಪಟ್ಟಿ ತು. ಅವರ ಜೀವನದ ಮುಂದಿನ ಆಶೆಯು ಗದಗದ ನಡುಗಿತು. ನಿರ್ದ ಯ ಬಂಧುಗಳು ತಮ್ಮ ಅಜ್ಞಾನದ ದುರಭಿಮಾನದಿಂದ ಇವರನ್ನು ಹಾಳು ಮಾಡಿಬಿಟ್ಟರು. ಇಲ್ಲಿಯುವರೆಗೆ ಅವರು ತಮ್ಮ ಧರ್ಮದ ಮೇಲಿನ ವಿಶ್ವಾ ಸದಿಂದ ಇದ್ದರು, ಆದರೆ ಈಗ ಧರ್ಮದಿಂದ ಬೇರೆಯಾದರು.

ಮೊದಲೇ ಅಲ್ಪ ಸಂಖ್ಯಾಕರರಿದ್ದ ತಾವು ಅನ್ಯಾಯದ ಅತಿರೇಕ ದಿಂದ ಕೆಲ ಜನರನ್ನು ತಮ್ಮ ಸಮಾಜದಿಂದ ಹೊರದೂಡಿ ತಮ್ಮ ಪವಿ ತ್ರತೆಯನ್ನು ಕಾಯ್ದುಕೊಂಡೆವೆಂದು ಹೆಮ್ಮೆ ಪಡುತ್ತಿದ್ದರು. ಮಾನವಜಾ ತಿಯ ಕಲ್ಯಾಣಕ್ಕಾಗಿಯೇ ಪ್ರತಿಯೊಬ್ಬನಲ್ಲಿ ತನ್ನ ಧರ್ಮದ ಅಭಿಮಾನ ಇರುತ್ತದೆ. ಅವನು ಬಡವನಿರಲಿ, ಸಿರಿಮಂತನಿರಲಿ, ಅಜ್ಞನಿರಲಿ, ಸುಜ್ಞಾ ನಿರಲಿ. ಎಂಥ ಉಚ್ಚಸ್ಥಿತಿಯಲ್ಲಿದ್ದರೂ ನೀಚಸ್ಥಿತಿಯಲ್ಲಿದ್ದರೂ ಅವನಿಗೆ ತನ್ನ ಧರ್ಮದ ಹೆಮ್ಮೆ. ಇವರು ಯಾವ ದುರಭಿಮಾನಗಳಿಂದ ತಮ್ಮ ಸಮಾಜದಿಂದ ದೂಡಲ್ಪಟ್ಟರೋ. ಅದೇ ತಾವು ಕ್ಷತ್ರಿಯರು ಕ್ಷತ್ರಿಯರೇ! ಹಿಂದುಗಳು ಹಿಂದುಗಳೇ! ಎಂಬ ಸದಭಿಮಾನದಿಂದ ಮುಸಲ್ಮಾನ ಧರ್ಮ ವನ್ನಾಗಲೀ, ಪರಧರ್ಮಗಳನ್ನಾಗಲೀ ಸ್ವೀಕರಿಸದೆ ತಮ್ಮಷ್ಟ ತಾವೇ ಮು ಸ್ಲಿಂ ಕ್ಷತ್ರಿಯರು. ಎಂದು ಬೇರೆಪಂಗಡವಾಗಿ ಮುಂದೇನು, ಎಂಬ ಯೋ ಚನೆಮಾಡಹತ್ತಿದರು.

ಅವರಿಗೆ ಈಗ ತಮ್ಮ ಜೀವನವೇ ಉದಾಸೀನವಾಗಿತೋರಿ ಎಲ್ಲರೂ ಕೂಡಿ ಒಂದು ಹೊಳೆಹಾರೋಣವೇ, ಇಲ್ಲಿದ್ದು ಮಾಡುವದಾದರೂ ಏನು. ಅರಸರು ನಮ್ಮ ನವಕರಿಯನ್ನು ದೋಚಿದರೆ ನಮ್ಮವರು ನಮ್ಮ ಧರ್ಮ ಅಭಿಮಾನಗಳನ್ನು ಕಸಿದರು. ಈ ವಿಶಾಲವಾದ ಜಗತ್ತಿನಲ್ಲಿ ತಾವೆಷ್ಟೋ ಅನಾಥರೂ ದುರ್ಗತಿಹೊಂದಿದವರೂ ಉಳಿದವರಿಗೂ ತಮಗೂ ಏನೇನೂ

ಸಂಬಂಧವಿಲ್ಲವೆಂದು ಚಿಂತಿಸಿದರು. ಆಗ ತಮ್ಮ ಜೀವನವು ಎತ್ತಸಾಗುವದು. ಎಂದು ಚಿಂತಿಸಿ ಸಂಕಟಪಟ್ಟರು. ಆದರೆ ಅವರಿಗೆ ಅದೆಲ್ಲಿಯದೋ ಆಶೆಯು 'ಹೀಗೆ ಚಿಂತಾಯುಕ್ತರಾಗಿ ಹತಾಶರಾಗುವದು ಸರಿಯಲ್ಲ. ಹೊಳೆಹಾರಲು ನೀವೊಬ್ಬರೇ ಇಲ್ಲ ನಿಮ್ಮನ್ನು ನಂಬಿ ನಿಮ್ಮ ಸಂರಕ್ಷಣೆಗೊಳಗಾದ ಕುಟುಂಬ ಸಂತತಿ ಇವೆ. ನಿಮಗೆ ಜೀವ ಬೇಡಾಗಿದ್ದರೆ ಅವರಿಗೂ ಬೇಡವೆ! ಅವರನ್ನು ಬಲಾತ್ಕಾರದಿಂದ ಕೊಂದು ಪಾಪಿಗಳಾಗುವಿರಾ,' ಎಂದು' ಉಪದೇಶಮಾಡುತ್ತಿತ್ತು.

ಒಮ್ಮೊಮ್ಮೆ ಉತ್ತರದೇಶದಲ್ಲಿ ತಮ್ಮ ಹಿಂದಿನ ಹಿರಿಯರು ಬಿಟ್ಟು ಬಂದ ಮನೆಮಾರುಗಳಿರಬಹುದು. ಅಲ್ಲಿಯಾದರೂ ಹೋಗೋಣವೆ, ಆದರೇನು ಮೂರುನಾಲ್ಕುನೂರು ವರ್ಷಗಳಾಗಿವೆ. ಹಿರಿಯರಿಲ್ಲ, ಗುರ್ತಿನವರಿಲ್ಲ, ಮೂರುನಾಲ್ಕು ತಲೆಮಾರುಸಾಗಿವೆ. ಎಂದ ಮೇಲೆ ಎಲ್ಲಿಯ ಮನೆ, ಎಲ್ಲಿಯನಾಡು ಎಂದು ನಿರಾಶರಾಗಿ ತಮ್ಮ ಮುಂದಿನ ಜೀವನದ ಬಗ್ಗೆ ವಿಚಾರಮಾಡಹತ್ತಿದರು ಇವರಷ್ಟೇ ಅಲ್ಲ ಇವರ ಹಿರಿಯರೂ ವಂಶಪರಂಪರೆಯಾಗಿ ಸೈನಿಕರಾಗಿದ್ದವರು ಪರ ನಾಡಿನಿಂದ ಬಂದು ಇಲ್ಲಿಯ ಅರಸರಲ್ಲಿ ಆಶ್ರಯ ಹೊಂದಿದವರು. ತಮ್ಮ ರಟ್ಟೆಯ ಕಸುವಿನಿಂದ ಬುದ್ಧಿಯ ಚಮತ್ಕಾರದಿಂದ ಏನಾದರೊಂದು ಶೌರ್ಯ ತೋರಿಸಿ ಪರಂಪರಾಗತವಾಗಿ ನಡೆಯುವಂಥ ಮೆಚ್ಚುಪಡೆಯಲು ಅಂಥ ಪ್ರಸಂಗವೇ ಬಾರದೆ ಅದು ಸಾಧ್ಯವಾಗಿರಲಿಲ್ಲ. ಕೇವಲ ಬಂದ ತಲಬಿನಿಂದ ಜೀವಿಸುತ್ತಿದ್ದರು. ಎಂದ ಮೇಲೆ ಇವರು ಧನವಂತರೂ ಆಗಿರಲಿಲ್ಲ. ಮತ್ತೆ ತಮ್ಮ ವೃತ್ತಿಯನ್ನು ಆರಂಭಿಸಬೇಕೆಂದರೆ ಇಲ್ಲಿಯ ಅರಸರೆಲ್ಲ ಮುರಕಳಿಗೆ ಬಂದಿದ್ದರು. ಇಂಗ್ಲೀಷರು ತಮ್ಮ ಸೈನ್ಯದಲ್ಲಿ ಸೇರಿಸಿಕೊಳ್ಳಬಹುದಾಗಿತ್ತು. ಆದರೆ ಇವರೂ ಪರಧರ್ಮದವರೆಂದು ಅಂಜಿ ಆ ವಿಚಾರವನ್ನೇ ಬಿಟ್ಟರು. ಹೀಗಾದರೆ ಮುಂದೇನುಮಾಡೋಣ ಎಂದು ಯೋಚಿಸುತ್ತಿರುವಾಗ ನಮ್ಮಲ್ಲಿ ಅನೇಕರು ಆರಂಭಿಸಿದ ಆಕರ್ಷಣೀಯ ಉದ್ಯೋಗವನ್ನೇ ಮಾಡಬೇಕೆಂದು ನಿರ್ಧರಿಸಿ ತಮಗೆ ಅನುಕೂಲ ವಸತಿಗಳನ್ನು ಹುಡುಕುವದಕ್ಕಾಗಿ ಎಲ್ಲರೂ ಬೇರೆಬೇರೆಯಾಗಿ ಕರ್ನಾಟಕದಲ್ಲಿ ವಿಲಾಸಿಜನಗಳ ಬೀಡುಗಳನ್ನು ನೋಡಿ ವಾಸ

ಮಾಡಿ ಮಧ್ಯತಯಾರಿಸಿ ಅದನ್ನು ಪಾನಮಾಡುವ ವಿಲಾಸಿಜನರಿಗೆ ಸುಲಭ ದರದಲ್ಲಿ ಸಿಸ್ತಿನಿಂದ ಒದಗಿಸಿಕೊಡುತ್ತ ಜೀವಿಸಹತ್ತಿದರು. ಈಗ ಕ್ಷತ್ರಿಯರು ಮಧ್ಯ ಮಾರಾಟದ ಕಲಾಲರಾದರು. ವಿಧಿಲೀಲೆ ವಿಚಿತ್ರವಲ್ಲವೆ! ಕ್ಷತ್ರಿಯರು ಕಾಲಚಕ್ರದಲ್ಲಿ ಸಿಲ್ಕಿ ಕಲಾಲರಾದರು. ಇನ್ನೂ ವಿಧಿವಿಲಾಸದಿಂದ ಏನಾಗುವರೋ! ಯಾರುಬಲ್ಲರು.



# ಕ್ಷತ್ರಿಯರೋ? ಕಟುಕರೋ?

ಹೀಗೆ ಕರ್ನಾಟಕದಲ್ಲಿ ತಮಗೆ ಅನುಕೂಲವಾದ ಸ್ಥಳಗಳಲ್ಲಿದ್ದು ಮಧ್ಯಮಾರಾಟಮಾಡುತ್ತಿರುವಷ್ಟರಲ್ಲಿ ಇವರ ಮೇಲೆ ಮತ್ತೊಂದು ಆಪತ್ತು ಕೂಡಿತು. ಅದೆಂದರೆ- ಆಗ ಭಾರತದತುಂಬಾ ಇಂಗ್ಲೀಷರು ತಮ್ಮ ರಾಜ್ಯವನ್ನು ವಿಸ್ತರಿಸಿ ಅದನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಅನೇಕ ಕಟ್ಟಳೆಗಳನ್ನು ಅಮಲಿನಲ್ಲಿ ತಂದರು. ಈ ಕಾಯಿದೆಗಳಲ್ಲಿ ಮಧ್ಯತಯಾರಿಕೆಗೆ ಸಂಬಂಧಿಸಿದ್ದು ಒಂದು ಈ ನಿಯಮದಿಂದಾಗಿ ಯಾರೂ ಮಧ್ಯತಯಾರಿಸತಕ್ಕದ್ದಲ್ಲ. ಹಾಗೂ ಸರಕಾರದ ಅಪ್ಪಣೆ ಪಡೆಯದೆ ಅದನ್ನು ಮಾರತಕ್ಕದ್ದಲ್ಲ. ಎಂದಾಯಿತು. ಆಗ ಇವರ ಆರ್ಥಿಕ ಸ್ಥಿತಿಯು ಕುಂಟಹತ್ತಿತು. ಸರಕಾರಕ್ಕೆ ಕರಕೊಟ್ಟು ಅಪ್ಪಣೆ ಪಡೆದು ಮಾರಲಿಕ್ಕೆ ಸಿದ್ಧರಾದರು. ಆಗ ಸರಕಾರವು ಮಧ್ಯ ಮಾರಾಟದ ಕೇಂದ್ರಗಳನ್ನು ಮಾಡಿ ಈ ಮಾರಾಟಗಾರರಿಗೆ ಮಾರಹತ್ತಿತು. ಇದರಿಂದ ಇವರ ಬಡತನವು ಬೇಗೆಯಂತೆ ಹಬ್ಬಿತು. ಯಾಕೆಂದರೆ ಸರಕಾರವು ಹೇಳಿದಷ್ಟು ಹಣಕೊಟ್ಟು ಮಾರಾಟಮಾಡಲಿಕ್ಕೆಂದು ಬೇರೆಯಾಗಿ ಸರಕಾರಕ್ಕೆ ಕರಕೊಡಬೇಕಾಗುತ್ತಿತ್ತು. ಇಂಥ ಸ್ಥಿತಿ ಇರುವಾಗ ಹಾಗೂಹೀಗೂ ಬಾಳುನೂಕುತ್ತಿರುವಾಗ ಸರಕಾರವು ಅತ್ಯಂತ ನಿಷ್ಠುರವಾದ ಒಂದು ಕಲಮನ್ನು ಜಾರಿಯಲ್ಲಿ ತಂದಿತು. ಎಂಪರೆ- ನಿರ್ದಿಷ್ಟಮಾಡಿದ ಸ್ಥಳದಲ್ಲಿ ನಿರ್ದಿಷ್ಟ ವೇಳೆಯಲ್ಲಿ ಹೆಚ್ಚಾದಪ್ರಮಾಣದ ಕರಕೊಟ್ಟು ಮಾರಬೇಕೆಂದು ಎಲ್ಲಿ ಮಾರಾಟ ಮಾಡಬೇಕೆಂಬ ಸ್ಥಳಗಳನ್ನು ಪ್ರಸಿದ್ಧಿಸಿತು. ಇದರ ಪರಿಣಾಮವಾಗಿ ಊರೂರಿಗೆ ನಾಲ್ಕೆಂಟು ಇದ್ದ ಮಧ್ಯದಂಗಡಿಗಳಿಗೆ ಪ್ರತಿಯಾಗಿ ನಾಲ್ಕೆಂಟು ಊರುಗ

ಳಿಗೊಂದು ಅಂಗಡಿಯಾಯಿತು. ಈ ಪರಿಸ್ಥಿತಿಯಿಂದಾಗಿ ಮಾರಾಟದ ಅಪ್ಪಣೆಪಡೆಯಲು ಇವರು ತಮ್ಮತಮ್ಮೊಳಗೆ ಪೈಪೋಟಿ ನಡೆಸುತ್ತ ಪರಸ್ಪರರಲ್ಲಿದ್ದ ಪ್ರೇಮ ವಿಶ್ವಾಸಗಳನ್ನು ಕಳೆದುಕೊಂಡು ನಾನುಹೆಚ್ಚು ನಾನು ಹೆಚ್ಚು ಎಂದು ಬಡೆದಾಡುತ್ತ ತಮ್ಮಲ್ಲಿದ್ದ ಹಣವನ್ನು ಲಿಲಾವುಗಳಲ್ಲಿ ಸರಕಾರದ ಬೊಕ್ಕಸಕ್ಕೆ ತುಂಬಹತ್ತಿದರು. ಸರಕಾರವು ಈ ಉತ್ಪನ್ನದ ಹೆಚ್ಚು ವಿಕೆಯನ್ನು ನೋಡಿ ಸಾರ್ವಜನಿಕವಾಗಿಯೇ ಅಂಗಡಿಗಳ ಲಿಲಾವುಗಳನ್ನು ಆರಂಭಿಸಿತು. ಈ ಆರಂಭದಿಂದಾಗಿ ಮುಂಬೈ, ಅಹಮ್ಮದಾಬಾದಗಳ ಫಾರ್ಸಿ ಶ್ರೀಮಂತರು ಈ ಮಧ್ಯಮಾರಾಟದ ಹಕ್ಕನ್ನು ಪಡೆಯುವದಕ್ಕಾಗಿ ಕರ್ನಾಟಕಕ್ಕೆ ಬರಹತ್ತಿದರು.

ತಮ್ಮತಮ್ಮಲ್ಲಿ ಏರಾಟನಡೆಸುತ್ತಿದ್ದಾಗ ಈ ಆಕರ್ಷಣೀಯವಾದ ಉದ್ಯೋಗದ ಮೇಲೆ ಫಾರ್ಸಿಗಳ ದೃಷ್ಟಿ ಬಿದ್ದು ಅವರು ಇಲ್ಲಿ ಬರುತ್ತಲೇ ಇವರ ಸದ್ದು ಅಡಗಿತು ಫಾರ್ಸಿಗಳು ದೊಡ್ಡ ಶ್ರೀಮಂತರು. ಅವರೆಲ್ಲ ಕೂಡಿ ಕಂಪನಿಮಾಡಿಕೊಂಡವರು. ಅಲ್ಲದೆ ವಿದ್ಯಾವಂತರಾಗಿದ್ದುದರಿಂದ ಸರಕಾರದ ವಶೀಲಿ ಹಚ್ಚಿಕೊಂಡವರು. ಹೀಗಾಗಿ ಅವರು ಸರಕಾರದಿಂದ ಒಂದೊಂದು ಭಾಗಗಳ ಗುತ್ತಿಗೆಗಳನ್ನು ಪಡಕೊಂಡರು. ಇದರಿಂದ ಈ ಕ್ಷತ್ರಿಯರು ನಿರುದ್ಯೋಗಿಗಳಾದರು. ಆಗ ಫಾರ್ಸಿಗಳ ಅಂಗಡಿಗಳಲ್ಲಿ ಮಾರಾಟಮಾಡುವ ಕಾರಕೂನರಾಗಲು ಕೆಲವರು ಪ್ರಯತ್ನಿಸಲು ಅಲ್ಲಿಯೂ ಇವರು ಹೋರಾಟ ಆರಂಭಿಸಿದರು. ಆ ಸಾವುಕಾರನಿಗೆ ಕೆಲವರು ಒಂದು ಗ್ಯಾಲನಕ್ಕೆ ಮಾರಾಟದ ಹಣದಮೇಲೆ ಒಂದು ರೂಪಾಯಿ ಹೆಚ್ಚು ಕೊಡುತ್ತೇನೆಂದರೆ ಕೆಲವರು ಒಂದುವರೆ ರೂಪಾಯಿ ಅನ್ನುವರು ಇವನನ್ನು ಕೆಲಸದಿಂದ ತಪ್ಪಿಸಲು ಅವನು ಅವನನ್ನು ತಪ್ಪಿಸಲು ಇವನು, ಇವರಿಬ್ಬರನ್ನು ವಂಚಿಸಲು ಮತ್ತೊಬ್ಬನು. ಹೀಗೆ ತಮ್ಮತಮ್ಮಲ್ಲಿ ಬಡಿದಾಡಹತ್ತಿದರು.

ಅಷ್ಟರಲ್ಲಿ ಫಾರ್ಸಿಗಳ ಗುತ್ತಿಗೆಯ ಅವಧಿ ಮುಗಿದದ್ದರಿಂದ ಸರಕಾರವು ಒಂದೊಂದು ಅಂಗಡಿಗೆ ಒಂದೊಂದು ವರ್ಷದ ಮುದ್ದತಿನಿಂದ ಲಿಲಾವುಗಳನ್ನು ಆರಂಭಿಸಿತು. ಆಗ ಕೆಲವರು ಫಾರ್ಸಿಗಳಿಗೆ ಹೇಳಿಕೊಂಡು

ಕೆಲವರು ಕಡಿಮೆವ್ಯಾಪಾರದ ಅಂಗಡಿಗಳೆಂದು ಬಿಟ್ಟವುಗಳನ್ನು ಇವರುಮಾಡ ಹತ್ತಿದರು ಆದರೆಉದ್ಯೋಗಗಳು ಕಡಿಮೆ. ಜನರು ಹೆಚ್ಚು. ಹೀಗಾಗಿಬಹು ಜನರು ನಿರುದ್ಯೋಗಿಗಳಾದರು ಆಗ ಕೆಲಜನರು ಉತ್ತರ ಕರ್ನಾಟಕ ಎಂದ ದಕ್ಷಿಣ ಮಹಾರಾಷ್ಟ್ರದ ಕಡೆಗೆ ಅಂಗಡಿಗಳು ಸಿಕ್ಕುವೆಂದು ಹೋದರು. ಆದರೂ ಇವರಿಗೆ ಕಾಯಂ ಉದ್ಯೋಗವಿಲ್ಲ. ಮಾಡುವ ಉದ್ಯೋಗದಲ್ಲಿ ಏರಾಟಗಳು. ಅದೂ ಒಂದೊಂದೇ ವರ್ಷದ ಕರಾರು. ಅದರಲ್ಲೇ ಘಾರ್ಸಿ ಗಳ ಕಣ್ಣುಬಿದ್ದರಂತೂ ತೀರಿತು. ಹೀಗಾಗಿ ಇವರಿಗೆ ಕಷ್ಟಕ್ಕಿಟ್ಟುಕೊಂಡಿ ತು. ಬೇರೆ ಉದ್ಯೋಗಗಳನ್ನೇನಾದರೂ ಮಾಡೋಣವೆಂದರೆ ಆಗ ಭಾರ ತದ ಎಲ್ಲ ಉದ್ಯಮಗಳಿಗೂ ಗೆದ್ದಲುಹತ್ತಿದಕಾಲ. ಯಂತ್ರಗಳ ಯುಗವು ಆರಂಭವಾಗಿ ದೇಶದಲ್ಲಿ ನಿರುದ್ಯೋಗವು ಬೇನೆಯಂತೆ ಹಬ್ಬುತ್ತಿತ್ತು. ಸರ ಕಾರದ ನವಕರಿಮಾಡಬೇಕೆಂದರೆ ವಿದ್ಯಾಭ್ಯಾಸವಿಲ್ಲ ಸಿರಿವಂತಿಕೆಯೇ ಸರ್ವಸ್ವ ಅವರೆದುರು ಉಳಿದುದೆಲ್ಲವೂ ಕಸ. ಎಂದು ತಿಳಿಯುತ್ತಿದ್ದಾಗ ವಿದ್ಯೆ ಕಲಿಯಲು ಶಾಲೆಗಳೇ ಇಲ್ಲದಾಗ ಇವರಿಗೆ ವಿದ್ಯೆಬರುವ ಬಗೆಹೇಗೆ! ಹೀಗಾ ಗಿ ನವಕರಿಯ ವಿಚಾರವು ಬಹುದೂರ ಜೊತೆಗೆ ಒಕ್ಕಟ್ಟಿಲ್ಲದ್ದಕ್ಕೆ ಯಾವ ಪರಿಹಾರವೂ ಇಲ್ಲದೆ ನಿರುದ್ಯೋಗವೇ ಇವರನ್ನು ಮುತ್ತಿಕೊಂಡಿತು. ಇವ ರಸ್ವಭಾವವೋ, ವಿಲಾಸಉಳ್ಳದ್ದು. ದಿನವೂ ಕುಡಿಯಲುಮದ್ಯ, ತಿನ್ನಲು ಮಾಂಸಬೇಕು. ಮದ್ಯವಿಲ್ಲದಿದ್ದರೂ ನಡೆದೀತು. ಮಾಂಸವಂತೂ ಬೇ ಕೇಬೇಕು. ಹೀಗಾಗಿ ಹಿಂದೆ ಗಳಿಸಿದ ದುಡ್ಡನ್ನೆಲ್ಲ ದಿನಾಲು ಮದ್ಯಮಾಂಸ ಗಳಿಗೆ ಖರ್ಚುಮಾಡಹತ್ತಿದರು. ದಿನಗಳ ಉರುಳುವಿಕೆಯ ಜೊತೆಗೆ ಇವ ರ ದುಡ್ಡು ಹರಿದುಹೋಗುತ್ತಿತ್ತು ಜೊತೆಗೆ ಕುಡಿಯುವ ತಿನ್ನುವ ಚಟವು ಮಾತ್ರ ಬೆಳೆಯುತ್ತಿತ್ತು. ಅದರಲ್ಲಿಯೇ ಸ್ವಲ್ಪ ಅನುಪು ಸಿಕ್ಕರೆ ಪ್ರತಿವರ್ಷ ನಾನು ಹಿಡಿಯುವೆ. ನಾನು ಹಿಡಿಯುವೆ ಎಂದು ಹೆಚ್ಚು ಹಣ ಏರಿಸಿ ಅಂಗ ಡಿಹಿಡಿಯುವರು. ಅಂಗಡಿ ಇದ್ದಾಗಂತೂ ಎಥೇಚ್ಛ ಕುಡಿಯುವರು ತಿನ್ನು ವರು. ಇದ್ದ ಅಂಗಡಿಗಳನ್ನು ಉಳಿಸಿಕೊಳ್ಳಲು ಅಧಿಕಾರಿಗಳಿಗೆ ಮುಚ್ಚು ಮರೆಯಲ್ಲಿ ಗೋಪಾಳಕೊಡುವರು. ಜನರಲ್ಲಿ ಇಲ್ಲದ ಸಿರಿವಂತಿಕೆ ತೋರ ಸಿಕೊಳ್ಳುವರು. ಹೀಗೆಯೇ ಸಾಗುತ್ತಿದ್ದಾಗ ಈಳಿಗರೂ ಇವರಿಗೆ ಪ್ರತಿ ಸ್ಪರ್ಧಿಗಳಾಗಿ ಬಂದರು. ಆಗ ಇವರು ಅತ್ಯಂತ ಅಧೋಗತಿಗಿಳಿದು ಹೋ

ಡಳು. ಇವರೊಡನೆ ತಮ್ಮ ಅಂಗಡಿಗಳನ್ನು ಉಳಿಸಿಕೊಳ್ಳಲು ನೂರು ಸಾವಿರದ ಅಂಕೆಗಳನ್ನು ಲಿಲಾವಿನಲ್ಲಿ ಸ್ಪರ್ಧಿಸುವರು. ಹಾನಿಯಾದರೆ ಹಣವನ್ನು ಕೈಯಿಂದ ತುಂಬುವರು. ಹೀಗೆ ಈ ಏರಾಟದ ಹೋರಾಟ ದಲ್ಲಿ ಎಷ್ಟೋ ಜನರು ಹಣ, ಭಂಗಾರ, ಹೊಲಮನೆಗಳನ್ನು ಕಳೆದುಕೊಂಡ ದ್ದಲ್ಲದೆ ಸಾಲಗಾರರಾದರು. ಹೆಂಡರು ಮಕ್ಕಳನ್ನು ದರಿದ್ರಮಾರಿಗೆಮಾರಿ ತಾವೂ ಬಲಿಯಾದರು ಅತ್ಯಂತ ದರಿದ್ರರಾದರು. ಹೀಗೆ ಭಯಾನಕವಾದ ಬಡತನವು ಇವರನ್ನಾವರಿಸಿದರೂ ಪ್ರಸಂಗ ಬಂದರೆ ಸ್ವಲ್ಪ ಅನುಕೂಲತೆ ಸಿಕ್ಕರೆ ಸಾಕು. ಮತ್ತೆ ಪ್ರಯತ್ನಮಾಡುವರು. ಏರಿಕೆಯಿಂದ ಅಂಗಡಿ ಹಿಡಿದು ಗಿರಾಕಿಗಳಿಗೆ ಗೊತ್ತಾಗದಂತೆ ಕಡಿಮೆ ತೂಕ, ಅಳತೆಗಳನ್ನು ಆ ರಂಭಿಸುವರು. ಏನು ಮಾಡಿದರೂ ದರಿದ್ರಭೂತವು ಇವರಿಗೆ ಎರಡೂ ಕೈಗಳನ್ನೆತ್ತಿ ಆಶೀರ್ವದಿಸಿತ್ತು. ಕಾರಣ ಯಾವದಾದರೊಂದು ಲೆಕ್ಕಹಾಕಿ ಅಂಗಡಿ ಹಿಡಿಯಲು ಅದು ಹಾನಿಯೇ ಆಗುತ್ತಿತು.

ಹೀಗೆಯೇ ಎಷ್ಟುಕಾಲಸಾಗಬೇಕು. ಕಾರಣ ಕೆಲಜನರು ಮತ್ತೊಂದು ಉದ್ಯೋಗವನ್ನು ಆರಂಭಿಸಿವರು. ಯಾವ ಉದ್ಯೋಗವು ಪ್ರತಿಸ್ಪರ್ಧಿ ಗಳಿಲ್ಲದ್ದು, ಹೆಚ್ಚು ಲಾಭ ಉಳ್ಳದ್ದು, ಏನೂ ಶ್ರಮವಿಲ್ಲದ್ದು ಇದರಿಂದಲೇ ಜೀವಿಸಬೇಕು. ಈ ಉದ್ಯೋಗವೇ ತಲೆತಲಾಂತರಗಳಿಂದ ಸಾಗಬೇಕು. ಎಂದು ಯೋಚಿಸಿ ಆರಂಭಿಸಿದ್ದರೋ, ಯಾವ ಉದ್ಯೋಗದಿಂದ ಕೈತುಂಬಾ ಗಳಿಸಿ ಸುಖವಾಗಿಬಾಳುತ್ತಿದ್ದರೋ, ಆ ಉದ್ಯೋಗವೇ ಕಾಲಗತಿಯಿಂದ ಸರಕಾರದ ಕಟ್ಟಿಗೆಬಿದ್ದು ಕಟ್ಟಿಗೊಳಗಾಗಬೇಕೇ, ಅದರ ಪರಿಣಾಮದಿಂದಾಗಿ ಪರಸ್ಪರರು ಬಂಧುಗಳು ಸ್ವಜಾತಿಯವರು ಎಂಬ ಭಾವನೆ ಬದಲಾಗಿ ದ್ವೇ ಷಾಸೂಯೆಗಳು ಹೆಚ್ಚಿ ಪೈಪೋಟಿಮಾಡಿಕೊಂಡು ಇದ್ದುದನ್ನೆಲ್ಲ ಕಳೆದು ಕೊಂಡು ಬಡವರಾಗಬೇಕೇ, ಮತ್ತಾವ ಉದ್ಯೋಗವನ್ನು ಆರಂಭಿಸ ಬೇಕೆಂದು ಈ ನಿರುದ್ಯೋಗಿಗಳು ಈ ದರಿದ್ರ ನಾರಾಯಣರು ಯೋಚಿಸಿ ಯೋಚಿಸಿ ಒಂದು ನಿರ್ಧಾರವನ್ನು ಮಾಡಿದರು. ಅದೆಂದರೆ ತಮ್ಮ ಪ್ರೀತಿ ಯ ಆಹಾರವಾದ ಮಾಂಸವನ್ನು ಮಾರಾಟಮಾಡಬೇಕೆಂಬುದು. ಯಾ ಕೆಂದರೆ ಇವರಿಗೆ ಇದರ ಅವಶ್ಯಕತೆ ಬಹಳ. ತಾವೇ ಇದನ್ನು ಮಾರಲಾ

ರಂಭಿಸಿದರೆ ತಮ್ಮ ಜನರೆಲ್ಲ ತಮ್ಮಲ್ಲಿಯೇ ಕೊಂಡುಕೊಳ್ಳುವರೆಂದು ಆಶೆ. ಅಲ್ಲದೆ ಆಗ ಮಧ್ಯಪಾನವು ಜನರಲ್ಲಿ ಹೆಚ್ಚುತ್ತಿದ್ದುದರಿಂದ ಮಾಂಸದ ಬಗ್ಗೆಯೂ ಅಭಿರುಚಿ ಹುಟ್ಟತೊಡಗಿತ್ತು. ಹೀಗಾಗಿ ಇವರು ಮೇಕೆಗಳನ್ನು ತಂದು ಕೊಂದು ಮಾರಾಟಮಾಡಹತ್ತಿದರು. ಮುಸಲ್ಮಾನರುಮಾತ್ರ ಇವರ ಮಾಲುಕೊಳ್ಳಲು ತಕರಾರು ಮಾಡಿದರು. ಯಾಕಂದರೆ- ಇವರು ಮೇಕೆಗಳನ್ನು ತಮ್ಮ ಕೈಯಿಂದಲೇ ಹೊಡೆಯುತ್ತಿದ್ದರು. ಹೀಗೆ ಮಾಡುವದು ಮುಸಲ್ಮಾನರಿಗೆ ಅಪವಿತ್ರವಾಗುತ್ತಿತ್ತು. ಮುಸಲ್ಮಾನರಿಗೆ ಅದು ಅವರ ಧರ್ಮದಂತೆ ಹಲಾಲ ಆಗಬೇಕಿತ್ತು ಕೊಳ್ಳುವವರಾದರೂ ಆಗ ಮುಸಲ್ಮಾರೇ ಹೆಚ್ಚಾಗಿದ್ದುದರಿಂದ ಮುಸಲ್ಮಾನ ಧರ್ಮದ ಮುಲ್ಲಾ, ಖಾಜಿಗಳಿಂದ ಅವುಗಳನ್ನು ಹಲಾಲ ಮಾಡಿಸಲು ಒಪ್ಪಿದರು. ಅಂದಿನಿಂದ ಮೇಕೆಗಳು ಮುಲ್ಲಾಗಳಿಂದ ಹಲಾಲ ಆಗಿ ಮಾರಾಟವಾಗಹತ್ತಿದವು ಬರಬರುತ್ತ ಈ ಕ್ಷತ್ರಿಯರು ಸಾರ್ವಜನಿಕವಾಗಿ ಅಂಗಡಿಗಳನ್ನೇ ಆರಂಭಿಸಿ ಮಾರಹತ್ತಿದರು.

ಅಂದಿನಿಂದ ಕ್ಷತ್ರಿಯರು ಎಂಬ ಹೆಸರು ಮರೆಯಾಗಿ ಹಲಾಲ ಆದುದನ್ನು ಮಾರುವ ಕಲಾಲರಾದರು ಕಾಲಗತಿಯು ವಿಚಿತ್ರವಲ್ಲವೇ, ಎಲ್ಲಿಯ ಧೀರ ಕ್ಷತ್ರಿಯರು ಎಲ್ಲಿಯ ಕುರಿಗಳಮಾಂಸ ಮಾರಾಟದ ಕಲಾಲರು. ಯಾರೇನು ಮಾಡುವದು. ಅಧೋಗತಿಯು ಮೇಲೆ ಬರಲು ಅವಕಾಶವಿಲ್ಲದಂತೆ ಮಾಡಿ ಮಹಾಕೂಪದಲ್ಲಿ ಧುಮುಕಿಸಿಬಿಟ್ಟಿತು. ಕೇವಲ ಹೊಟ್ಟೆಗಾಗಿ ಎಷ್ಟೋ ಜನರು ರಾಜ್ಯಗಳ ನಾಶಕ್ಕೆ ಕಾರಣವಾದ ಇದಕ್ಕೂ ಹೀನ ಕಾರ್ಯಗಳನ್ನೆಸಗಿಲ್ಲವೆ, ಅವರದನ್ನು ಸ್ಮರಿಸಿ ನಾವು ಇನ್ನೂ ಎಷ್ಟೋ ಸುದೈವಿಗಳು ಎಂದು ಸಮಾಧಾನಪಟ್ಟು ಉಸಿರುಹಾಕಬೇಕಲ್ಲವೇ.

*

# ಸ್ವಭಾವ ಗುಣಗಳ ಬದಲಾವಣೆ

ಮಾನವನು ಜಗನ್ನಿಯಾಮಕನು. ನಿರ್ಮಿಸಿದ ಎಲ್ಲ ಪ್ರಾಣಿಗಳಿಗಿಂತಲೂ ಕೊನೆಯವನು ಪ್ರಕೃತಿದೇವಿಯ ಕಿರಿಯಮಗನು. ಆದರಲ್ಲಿ ಹೆಚ್ಚು ಪ್ರೇಮ ಪಾತ್ರನು ಅಂತೇ ಪರಮಾತ್ಮನು ಪ್ರಕೃತಿಯ ಈ ಪ್ರೇಮ ಪಾತ್ರನ್ನೈ ತಾನೂ ಮರುಳಾಗಿ ಎಲ್ಲ ಪ್ರಾಣಿಗಳಿಗಿಂತಲೂ ಮೇಲ್ಮಟ್ಟದವನನ್ನಾಗಿರಿಸಿದನು. ಎಂದರೆ ಅವನಿಗೆ ಮನಸ್ಸನ್ನೂ, ಬುದ್ಧಿಯನ್ನೂ ಕೊಟ್ಟನು. ಈ ಮನಸ್ಸು ಬುದ್ಧಿಗಳ ಬಲದಿಂದಾಗಿ ಆವನು ಜಗದ ಎಲ್ಲ ಪ್ರಾಣಿಗಳನ್ನು ಮಿಕ್ಕಿದ್ದಾನೆ. ಅಲ್ಲದೆ ಅವೆಲ್ಲವುಗಳಿಗಿಂತ ವಿಶಿಷ್ಟವಾದ ಅಧಿಕಾರವನ್ನು ಪಡೆದು ಮೋಕ್ಷಕ್ಕೆ ಅರ್ಹನಾಗಿರುತ್ತಾನೆ. ಆದರೆ ಯಾವ ಶಕ್ತಿಗಳ ಸಹಾಯದಿಂದ ಅಪಾರ ಸುಖವನ್ನು ಪಡೆಯಬಲ್ಲದೋ.

ಅದೇ ಶಕ್ತಿಯ ದುರುಪಯೋಗದಿಂದ ಒಮ್ಮೊಮ್ಮೆ ಅಧೋಗತಿಗೂ ಇಳಿಯುತ್ತಾನೆ. ಹೀಗೆ ಮಾನವ ಪ್ರಾಣಿಯು ಜಗತ್ತಿನಲ್ಲಿ ತಾನುಹುಟ್ಟಿದಂದಿನಿಂದ ಇಂದಿನ ವರೆಗೆ ಸುಖದುಃಖಗಳಸೆಳವಿಗೆ ಬಿದ್ದಿದ್ದಾನೆ. ಹೀಗೆ ಜಗತ್ತು ಸಾಗಿದೆ- ಮುಂದೆಸಾಗುತ್ತದೆ.

ಮೊದಲಿನ ಅನಾಗರಿಕನು ಬೇಟೆಯಾಡಿ ಜೀವಿಸುತ್ತಿದ್ದನು. ಅವನು ಕ್ರಮವಾಗಿ ತನ್ನ ಬುದ್ಧಿ ಶಕ್ತಿಯ ಸಹಾಯದಿಂದ ಬೇಟೆ ಬಿಟ್ಟು ಫಲಾಹಾರದಿಂದ ಜೀವನಸಾಗಿಸಿದನು. ಆಗಿನಿಂದಲೇ ಅವನು ಒಬ್ಬೊಂಟಿಗನಾಗಿ ಇರುವದನ್ನು ಬಿಟ್ಟು ಸಾಮೂಹಿಕವಾಗಿ ಜೀವನ ಸಾಗಿಸಹತ್ತಿದನು.

ಅಂದಿನಿಂದಲೇ ಕುಟುಂಬ, ಸಮಾಜ. ದೇಶ, ರಾಷ್ಟ್ರ ಧರ್ಮಗಳ ಉದಯವಾಯಿತೆನ್ನಬಹುದು. ಆಮೇಲೆ ಅವನು ಕೃಷಿ ಕರ್ಮವನ್ನಾರಂಭಿಸಿದನು.

ಹೀಗೆ ಅವನು ತನ್ನ ಅನುಭವದಿಂದ ಜೀವನದಲ್ಲಿ ಸುಧಾರಣೆಯನ್ನು ತಂದಂತೆ ಅದು ಅವನಿಗೆ ವಿಶಾಲವೂ ಆಯಿತು ಆಗ ಜೀವನರಂಗದಲ್ಲಿ ಅನೇಕ ಅಂಗಗಳನ್ನಾಗಿ ಮಾಡಿ ಒಂದೊಂದು ವಿಭಾಗಕ್ಕೆ ಒಂದೊಂದು ಜೀವನತೆಯ ಗುಂಪನ್ನು ನಿಯಮಿಸಿದನು. ಹೀಗೆ ಜೀವನ ಸಾಗಿಸುವ ಸುಧಾರಣಾ ಪದ್ಧತಿಯು ಜಾರಿಯಲ್ಲಿ ಬಂದಮೇಲೆ ಒಂದಕ್ಕೊಂದು ಕ್ರಮವಿಲ್ಲದ್ದಕ್ಕೆ ಅವನಿಗೆ ಬೇಕಾದ ಆಹಾರವೆಂದರೆ ಯೋಗ್ಯವಾದ ಆಹಾರದ ಅಭಾವವಾಯಿತು ಅದರಿಂದ ಅವನು ಸಿಕ್ಕ ಆಹಾರವನ್ನೇ ತಿಂದು ಬಾಳಬೇಕಾಯಿತು ಮಾನವ ಬುದ್ಧಿಯ ಓಟಕ್ಕೆ ಮುಖ್ಯವಾಗಿ ಆತನ ಆಹಾರವೇ ಕಾರಣ. ಆಹಾರದಿಂದಲೇ ಆತನ ಬೌದ್ಧಿಕ ಬೆಳಗೆ ಬುದ್ಧಿಯಿಂದಲೇ ಸ್ವಭಾವ ಸ್ವಭಾವದಂತೆ ಕಾರ್ಯ ಕಾರ್ಯದಿಂದಲೇ ಆತನ ಉನ್ನತಿ ಅವನತಿಗಳುಂಟಾಗುವವು.

ರಾವಣನು ತಾನು ಉಪಯೋಗಿಸುವ ಆಹಾರದಿಂದಲೇ ಕ್ರೂರನಾದನು. ಆ ಕ್ರೂರತನದಿಂದಲೇ ಆತನ ಬುದ್ಧಿ ಮಂದವಾಯಿತು. ಅದರಿಂದಲೇ ಆತನು ತನ್ನ ದುಷ್ಟಸ್ವಭಾವದಂತೆ ಕೆಲಸಮಾಡಿದನು, ಲಂಕೆಯ ಕುಲವನ್ನೇ ನಾಶಮಾಡಿಕೊಂಡನು. ಅದೇ ಶ್ರೀರಾಮಚಂದ್ರನು ತನ್ನ ಸಾತ್ವಿಕ ಆಹಾರದಿಂದಾಗಿ ವಾನರರೊಡನೆ ಸ್ನೇಹಬೆಳಸಿ ತನ್ನ ಬುದ್ಧಿಯ ಚಾಣಾಕ್ಷತೆಯನ್ನು ತೋರಿ ಬಲಾಢ್ಯನೂ ಕ್ರೂರನೂ ಆದ ರಾವಣನನ್ನಲ್ಲದೆ ಆತನ ಕುಲವನ್ನೇ ನಾಶಮಾಡಿದನು. ಮತ್ತು ತನ್ನ ಸದಾಚರಣೆಯಿಂದಾಗಿ ನಡೆದು ಇಂದಿಗೂ ದೇವಾಂಶನಾಗಿ ಪೂಜೆಗೊಳ್ಳುತ್ತಿರುವನು. ಗೀತೆಯಲ್ಲಿಯೂ ಕೂಡ ಪರಮಾತ್ಮನು ಮಾಡಿದ ಉಪದೇಶದಲ್ಲಿ ಆಹಾರದಿಂದಲೇ ಸ್ವಭಾವ ಸ್ವಭಾವದಂತೆ ಆಚರಣೆ ಆಚರಣೆಯಬಲದಿಂದಲೇ ಧ್ಯೇಯಪೂರ್ತಿ ಎಂದು ಜಗತ್ತಿಗೆ ಸಾರಿದ್ದಾನೆ. ಇದೀಗ ನಾವು ಭಾರತ ಇತಿಹಾಸದಲ್ಲಿ ಅದ್ವಿತೀಯ ಸ್ಥಾನವನ್ನು ಪಡೆದ ಪ್ರತಾಪನ ಅನುಯಾಯಿಗ

ನಾದ ಕ್ಷತ್ರಿಯರಲ್ಲಿ ಎಂದರೆ ಇಂದಿನ ಕಲಾಲರಲ್ಲಿ ಆಹಾರದ ಪ್ರಭಾವ ಯಿಂದಾಗಿ ಹೇಗೆ ಅವಗುಣಗಳುಂಟಾದವು. ಎಂಬುವದನ್ನೀಗ ತೋರಿಸಬೇ ಕಾಗಿದೆ.

ಇವರು ಉತ್ತರ ಹಿಂದುಸ್ಥಾನದಲ್ಲಿದ್ದಾಗ ಸ್ವಾಭಿಮಾನಿಗಳು ಸತ್ಯ ಕ್ಕೆ ಸಾಯುವವರು. ಶೀಲಕ್ಕಾಗಿ ಎಂಥ ವಿಪತ್ತು ಬಂದರೂ ಎದುರಿಸು ವರು ಆಗ ಅಲ್ಲಲ್ಲಿ ಅನೇಕ ರಾಜ್ಯಗಳಿದ್ದರೂ ಸ್ವತಂತ್ರರಾಗಿದ್ದುಕೊಂಡು ಎಲ್ಲರೂ ತಮ್ಮತಮಗುಚಿತ ಕಾರ್ಯಗಳನ್ನು ಮಾಡಿ ತಮಗೆ ಬೇಕಾದ ಯೋಗ್ಯ ಆಹಾರವನ್ನು ಬೆಳಸಿಕೊಂಡು ತಮ್ಮ ಕಾರ್ಯಬಲದಿಂದ ಬುದ್ಧಿ ಶಕ್ತಿಯನ್ನು ಬೆಳಿಸುತ್ತ ಕೇವಲ ಧರ್ಮಕ್ಕಾಗಿ ಅಲ್ಲಲ್ಲಿ ರಾಜ್ಯಗಳನ್ನು ಕಟ್ಟಿ ದ್ದರು. ಆದರೆ ಇಲ್ಲಿ ಪರಕೀಯನಾದ ಬಾಬರನು ಪ್ರವೇಶಿಸುತ್ತಲೇ ಆತ ನು ತನ್ನ ದುರ್ದೈವವನ್ನು ಅವರಿಗೆ ಕೊಟ್ಟು ತಾನು ಸುದೈವಿಯಾದನು. ಆಗ ಕ್ಷತ್ರಿಯರು ಅವನೆದುರಿಗೆ ಪರಸ್ಪರ ಸಂಘಟನೆಇಲ್ಲದೇ ದುರಭಿಮಾನಿ ಗಳಾಗಿ ತಮ್ಮತಮ್ಮೊಳಗೆ ಬಡಿದಾಡುತ್ತಿದ್ದರು. ಯಾರೇನುಮಾಡಬೇಕು ಅನೇಕ ಧರ್ಮ ಪಂಥ ಶಾಸ್ತ್ರಗಳು ನಮ್ಮಲ್ಲಿದ್ದ ಪರಿಣಾಮದಿಂದಾಗಿ ಅತಃಕ ಲಹಗಳನ್ನಾಡುತ್ತಿದ್ದುದರ ಲಾಭವನ್ನು ಬಾಬರನು ಅನಾಯಾಸವಾಗಿ ಪಡೆ ದು ತನ್ನ ರಾಜ್ಯವನ್ನು ಐಶ್ವರ್ಯ ಅಧಿಕಾರಗಳ ಆಶೆ ತೋರಿಸಿ ಮರುಳು ಮಾಡಿದನು. ಇವರೆಲ್ಲರೂ ಆತನು ತೋರಿಸಿದ ಆಶೆಗೆ ಮರುಳಾಗಿ ಶಾಸ್ತ್ರ ಧರ್ಮಗಳನ್ನು ಮರೆತರಷ್ಟೇ, ಅಲ್ಲದೆ ಅದರ ಅಭಿಮಾನಿಗಳಿಗೂ ಪರಿ ಪರಿ ಕಾಡಿಸಿದರು.

ಈ ಕಾಟದಿಂದಾಗಿಯೇ ತಮ್ಮ ಶೀಲ ರಕ್ಷಣೆ ಮಾಡಿಕೊಳ್ಳಬೇಕೆಂಬ ಸದುದ್ದೇಶದಿಂದಲೇ ಉತ್ತರನಾಡಿನಿಂದ ಬಂದ ಈ ಗುಂಪು ಓಡಿದ ಕ್ಷಣ ಕ್ಕೆಳಿಯಿತು. ಆಗ ಇಲ್ಲಿ ಚಿಕ್ಕ ರಾಜ್ಯಗಳಿದ್ದರೂ ಹೇಗೋ ಆಶ್ರಯ ಸಿಕ್ಕಿ ತು. ಇವರು ಬರುವಾಗ ತಮ್ಮ ಸಂಪತ್ತನ್ನು ಕಳೆದುಕೊಂಡರು. ಕೂಳು ನೀರಿಲ್ಲವೆ ಅಲೆದರು, ಇಲ್ಲಿ ಅವರಿಗೆ ಅತ್ಯಂತ ಕೀಳು ತರಗತಿ ವೃತ್ತಿ ದೊರೆ ಯಿತು. ಅಲ್ಪವೇತನದಿಂದಾಗಿಯೇ ತಮ್ಮ ಸಂಸಾರ ಹೊಟ್ಟೆ ಬಟ್ಟೆಸಾಗಿಸ ಬೇಕು. ಹೀಗಾಗಿ ಇದ್ದಷ್ಟು ಹಣದಲ್ಲಿ ಎಲ್ಲರಿಗೂ ಸಾಗುವಂಥ ನಿಸ್ಸತ್ವ

ಆಹಾರವನ್ನು ದೊರಕಿಸಿಕೊಳ್ಳಹತ್ತಿದರು. ಜೀವನದಲ್ಲಿ ಬುದ್ಧಿಶಕ್ತಿಯನ್ನು ಪಯೋಗಿಸುವದೊತ್ತಟ್ಟಿಗಿರಲಿ ಹೇಗಾದರೂ ಜೀವಿಸಿದರೆ ಸಾಕು. ಎನ್ನು ವಷ್ಟು ಕಂಗಾಲಾದರು. ಸರಿಯಾದ ಆಹಾರವಿಲ್ಲದ ಜನತೆಯ ಜೀವನವು ಯಾವಬಗೆಯ ಬರುತ್ತದೆ. ಎಂಬುದನ್ನು ಹಿಂದಿಯರಿಗೆ ಹೇಳುವ ಅವಶ್ಯ ವಿಲ್ಲ. ಅದನ್ನು ಅನುಭವಿಗಳಾದ ಅವರು ಅರಿತು ಅನುಭವಿಸಿದ್ದಾರೆ ಹೀಗೆ ಬರಗಾಲದ ಜೀವನಸಾಗಿಸುತ್ತಿರುವಾಗ ಅದಕ್ಕೂ ಕಾಲ ಬಂದಿತು. ಇಲ್ಲಿಯ ವರೆಗೆ ಸಾಗಿಬಂದ ದೀನ ಜೀವನದ ಸಂತತಿಯು ತನ್ನ ಕುಲವೃ ತ್ತಿಯ ಯೋಗ್ಯತೆಯನ್ನು ಕಳೆದುಕೊಂಡಿತ್ತು. ಅದರಿಂದಾಗಿ ದುರ್ಬಲವಾಗಿ ಕಂಗಾಲಾಗಿತ್ತು. ಹೀಗಾಗಿ ಸೈನಿಕ ವೃತ್ತಿಗೂ ಶರಣುಹೊಡೆಯಿತು.

ಆಗ ಭಾರತ ಸ್ವಾತಂತ್ರ್ಯವು ಭರದಿಂದ ಜಾರುವಕಾಲ. ಇಲ್ಲಿಯ ಅರಸರು ದುರಹಂಕಾರಿಗಳಾಗಿ ತಮ್ಮತಮ್ಮಲ್ಲಿ ಬಡಿದಾಡುವರು. ಹಾನಿ ತುಂಬಿಸಲು ಪ್ರಜೆಗಳನ್ನು ಗೋಳಾಡಿಸುವರು. ಇಂಥ ದಾರುಣವಾದ ಪರಸ್ಥಿತಿಯಲ್ಲಿ ಇವರು ನಿರುದ್ಯೋಗಿಗಳಾದರು. ಅಲ್ಲದೆ ದುರ್ಬಲರು, ಬಡ ವರು ಶಿಕ್ಷಣವಿಲ್ಲದೆ ಸಾಗಿದರು. ವಿಚಾರಶಕ್ತಿಯಂತೂ ಬಾಡಿಹೊಗಿತ್ತು. ಧರ್ಮ ಸಂಸ್ಕೃತಿಯನ್ನು ವಿಚಾರಿಸುವಷ್ಟು ಶಕ್ತಿ ಇರಲಿಲ್ಲ. ಅದೇಕೆ ಅವು ಗಳನ್ನು ಮರೆತಿತ್ತು. ಹೇಗಾದರೂ ಮಾಡಿ ಏನಾದರೂ ಉಪಾಯಮಾಡಿ ಹೊಟ್ಟೆತುಂಬಿಕೊಳ್ಳಬೇಕು. ಹೊಟ್ಟೆಗೆ ಹಿಟ್ಟಿಲ್ಲದಾಗ ಎಲ್ಲಿಯ ಧರ್ಮ ಎಲ್ಲಿಯ ವಿಚಾರ. ಇವೆಲ್ಲವೂ ಹೊಟ್ಟೆಯ ಪ್ರಶ್ನೆಯದುರು ಎಲ್ಲಿಯೋ ಓಡಿದವು. ಹೀಗಾಗಿ ತಮಗೆ ಪರಿಚಿತವಾದ ಎಂದರೆ ಯುದ್ಧಕಾಲದಲ್ಲಿ ಕುಡಿದು ಮತ್ತರಾಗಿ ವೈರಿಗಳನ್ನು ಹಣಿಯಲು ಹುರುಪುಕೊಡುವ ಮಧ್ಯ ಅದನ್ನು ಎಂದಾದರೊಮ್ಮೆ ಹಬ್ಬಹುಣ್ಣಿವೆಗಳಲ್ಲಿ ವಿಲಾಸಕ್ಕಾಗಿ ಉಪಯೋ ಗಿಸುತ್ತಿದ್ದರು. ಅದರ ಮಾರಾಟವನ್ನು ಆರಂಭಿಸಿದರು. ಆಗ ಅವರಲ್ಲಿ ಪರಸ್ಪರ ದ್ವೇಷ ಬೆಳೆಯಿತು. ಈ ಗಿರಾಕಿ ನನ್ನದು ಆ ಗಿರಾಕಿ ಅವನದು. ಅದನ್ನು ತನ್ನೆಡೆಗೆ ಉಳಕೊಳ್ಳಬೇಕು. ಹೀಗೆ ಈರ್ಷೆಯುಗದ ಆರಂಭ ವಾಯಿತು.

ಪರೋಪಕಾರ ದಯಗಳಿಗೆ ಬದಲಾಗಿ ಕೃಪಣತೆ ಕ್ರೋಧಗಳು ಇವ

ರಲ್ಲಿ ಪ್ರವೇಶಿಸಿದವು ಮುಂದೆ ಬ್ರಿಟಿಶ ಸರಕಾರದ ಮಧ್ಯ ಮಾರಾಟದ ಕಟ್ಟಳೆಯಿಂದಾಗಿ ಈ ಉದ್ಯೋಗಕ್ಕೂ ಕೊಡಲಿ ಏಟು ಬಿದ್ದಾಗ ಅವರು ಪೂರ್ಣವಾಗಿ ಅನಾಗರಿಕತ್ವವನ್ನು ಪಡೆದರು. ತಾಮಸರಾದರು. ಮಧ್ಯ ಮಾಂಸಗಳ ಮಿತಿಯಿಲ್ಲದ ಉಪಯೋಗದಿಂದಾಗಿ ಕಾಮಿಗಳೂ, ;ಮುಂದರೂ, ಮತ್ಸರಿಗಳೂ ಆದರು. ಯಲ್ಲಿಯ ಮಾನವರೆಂದರೆ ಬಂಧುಗಳೆಂಬ ಉದಾತ್ತಭಾವನೆಯಲ್ಲಿಯು ತನ್ನನ್ನುಳಿದು ಮಿಕ್ಕವರೆಲ್ಲ ದರಿದ್ರರಾಗಬೇಕೆಂಬ ದುಷ್ಟಭಾವನೆ; ಯಾವ ಜನಾಂಗವು ಧರ್ಮವೇನೆಂಬುದನ್ನರಿಯಲು ಅದರಂತೆ ಆಚರಿಸಲು ಸರ್ವಾರ್ಪಣ ಮಾಡಲು ಸಿದ್ಧವಿದ್ದಿತೋ ಅದೇ ಜನಾಂಗವೇ ಧರ್ಮವೇನೆಂಬುದರ ಗುರುತುಕೂಡಾ ಇಲ್ಲದೆ ಅಜ್ಞಸ್ಥಿತಿಯಲ್ಲದೆ ಹೀಗೆ ದೇಶ, ಕಾಲ, ಆಹಾರ, ಉದ್ಯೋಗಗಳ ಬದಲಾವಣೆಯಲ್ಲದೆ ಸುಗುಣಗಳಿಗೆ ಪ್ರತಿಯಾಗಿ ದುರ್ಗುಣಗಳನ್ನು ಪಡೆದು ಸಾತ್ವಿಕರಾದ ಇವರು ಇಂದು ತಾಮಸಿಗಳಾಗಿ ತಮ್ಮ ವಿನಾಶಕ್ಕಾಗಿ ಒಬ್ಬೊರು ಮತ್ತೊಬ್ಬರ ಬೆನ್ನಲ್ಲಿ ಚೂರಿಹಾಕುತ್ತಿದ್ದಾರೆ ಮುಂದುವರಿಯುವ ಜಗತ್ತಿನೊಡನೆ ಹೊಸದಾರಿಯಲ್ಲಿ ಸಾಗುವದನ್ನು ಬಿಟ್ಟು ಇನ್ನೂ ಇನ್ನೂ ಹಿಂದೆ ಸಾಗಲಿಕ್ಕೆ ಅಡ್ಡದಾರಿ ಹುಡುಕುತ್ತಿದ್ದಾರೆ. ಇವರೇ ದುರ್ದೈವಿ, ಅಜ್ಞ, ಅಲ್ಪಸಂಖ್ಯಾಕ ದೀನರಾದ ಕ್ಷತ್ರಿಯರು, ಅರ್ಥಾತ ಕಲಾಲರ.

# ಪಂಗಡಗಳು

ವಿಶಾಲ. ನಿರ್ಮಲ, ಸತ್ಯ ಮತ್ತು ದಯೆ ಈ ದೃಷ್ಟಿಯಿಂದ ವಿಚಾರಮಾಡಿದರೆ ಈ ಚಿಕ್ಕದಾದ ಗುಂಪಿನಲ್ಲಿ ಪಕ್ಷ ಪಂಗಡಗಳೆಂಬ ಕಲ್ಪನೆ ಉಸುಕಿನಲ್ಲಿಯ ಮನೆಯಂತೆ ಪೊಳ್ಳಾಗುತ್ತದೆ ಯಾಕಂದರೆ ಒಂದೇ ಜಾತಿಯ ಒಂದೇ ಕಡೆಯ ಒಂದೇ ಉದ್ದೇಶದ ಒಂದೇ ನಿಶ್ಚಯದ ಒಂದೇಕರ್ಮದ ಒಂದಂಗವಾಗಿ ಇವರು ಹೊರಟು ಬಂದವರು. ಆದರೆ ದುರ್ದೈವದಿಂದ ಟೀಪುಸುಲ್ತಾನನ ಆಳಿಕೆಯಲ್ಲಿ ತೆರೆಯಮರೆಯಲ್ಲಿ ನಡೆದ ನಿಷ್ಠುರವಾದ ಆಗ್ರಹಕ್ಕೆ ಬಲಾತ್ಕಾರದಿಂದ ಬಲಿಬಿದ್ದ ಅಭಿಮಾನಿಗಳಿಗೆ ದೀನರಿಗೆ ಪವಿತ್ರರಿಗೆ ತಾವೆಲ್ಲ ಕೂಡಿ ದೇಹದ ಮೇಲೆ ಧರ್ಮದ ಕುರುಹು ಇದೆ ಆದ್ದರಿಂದ ಇವರು ನಮ್ಮಿಂದ ಪರರು. ಎಂದು ಅವರನ್ನು ಧರ್ಮದಿಂದ ತಡೆದು ಹಾಕಿ ತಮ್ಮ ಬಲವನ್ನು ಕಡಿಮೆಮಾಡಿಕೊಂಡು ತಮ್ಮನ್ನು ತಾವೇ ಧನ್ಯರೆಂದುಕೊಂಡು ಶಕ್ತಿ ಸಂಘಟನೆಗಳನ್ನು ಕಳೆದುಕೊಂಡಾಗಲೇ ಅವರಲ್ಲಿ ಪಂಗಡಗಳಿವೆ ಎಂಬ ಕಲ್ಪನೆ ಒಡಮೂಡಿತು. ಅಂದಿನಿಂದ ಹಿಂದೂ ಕಲಾಲರು ಮುಸ್ಲಿಂ (ಲಾಂಡೆ) ಕಲಾಲರು ಎಂಬ ಎರಡು ಭಾಗಗಳಾದವು. ಎಂದು ಹೇಳಬಹುದು. ಮೊದಲೇ ವಂಶಪರಂಪರವಾಗಿ ನಡೆದು ಬಂದ ಕರ್ತವ್ಯದಿಂದ ನಿವೃತ್ತರಾದ ಇವರು ಬಹು ಸಂಖ್ಯಾಕರಾದ ತಮ್ಮ ಜನರಿಂದ ದೂರಾದ ಇವರು ವಿಶ್ವದಲ್ಲಿ ಅಡಕವಾದ ಮಹತ್ತತ್ವಗಳಿಂದ ತಮ್ಮ ನಿರ್ಣಯವು ತಮ್ಮ ಸಿದ್ಧಾಂತವು ದೂರವಾಗಿದೆ. ದುಷ್ಟವಾಗಿದೆ ಆದರಿಂದ ತಮ್ಮದೇ ಘಾತಕವಾಗುತ್ತದೆ. ಎಂಬುದನ್ನರಿಯದಾದರು. ದುರ

ಭಿಮಾನವು ತನ್ನ ದರ್ಪದ ಬಲದಿಂದ ನಿರಪರಾಧಿ ದೀನರನ್ನು ಮೆಟ್ಟಿ ತುಳಿದು ದೂರ ಬಿಸಾಕಿತು. ಯಾವ ಪವಿತ್ರವಾದ ಉದ್ದೇಶದಿಂದ ಬಂದವರ ವಂಶಜರು ತಾವು. ಎಂಬುದನ್ನರಿಯದೆ ತಮ್ಮ ಆಳವನ್ನು ಮೀರಿದ ಪರಿಸ್ಥಿತಿಯಲ್ಲಿ ಸಿಕ್ಕು ತಮ್ಮ ಧ್ಯೇಯದಿಂದ ಕಳಚಿ ಬಿಟ್ಟರು, ಅಂದಿನಿಂದಿವರು ಕೃಷ್ಣಪಕ್ಷದ ರಾತ್ರಿಯಲ್ಲಿಯ ಕಾನನದಂತೆ ಭೀಕರರಾದರು. ಅವನತಿ, ಅಧೋಗತಿ, ದಾರಿತಪ್ಪಿದರೆ ತಪ್ಪಿದ್ದು ತಿಳಿಯದಿದ್ದರೆ ತಪ್ಪು ದಾರಿಯೇ ಸರಿಯೆಂದು ತಿಳಿದರೆ ಆಗುವದೇ ಹೇಗೆ ಅಲ್ಲವೇ.

ದುರ್ದೈವದಿಂದ ಹೇಗೆ ಇವರಲ್ಲಿ ಎರಡು ಬಣಗಳಾದ ಅಲ್ಪಕಾಲದಲ್ಲೇ ಮುಂದೆ ಪರಿಸ್ಥಿತಿಯು ಇವರನ್ನು ಮತ್ತೆ ಸಂಕಟಕ್ಕೀಡುಮಾಡಿತು. ಸರಕಾರದ ಕಟ್ಟಳೆಯ ಪರಿಣಾಮದಿಂದ ಮಧ್ಯ ಮಾರಾಟಮಾಡುವದನ್ನು ಕಳೆದುಕೊಂಡ ಕೆಲ ಕುಟುಂಬಗಳು ಈಗಿನ ದಕ್ಷಿಣ ಮಹಾರಾಷ್ಟ್ರದ ಕಡೆಗೆ ಹೋಗಿ ಅಲ್ಲಿಯೇ ಕೆಲವರು ಮಧ್ಯ, ಮಾಂಸಗಳನ್ನು ಮಾರುತ್ತ ನಿಂತರು. ಅತಿ ಅಲ್ಪ ಸಂಖ್ಯಾಕರೂ, ಮಂದ ಬುದ್ಧಿಯವರೂ, ಮಹಾಷ್ಟ್ರರಿಗೆ ಅಪರಿಚಿತರೂ ಆದ ಇವರು; ಅಲ್ಲಿಯ ವಾತಾವರಣಕ್ಕೆ ಮಾರು ಹೋಗಿ ಆ ಜನರ ಭಾಷೆ ಬಾಳ್ವೆಗಳಲ್ಲಿ ಹೊಂದಿಕೊಳ್ಳಬೇಕಾಯಿತು. ಹಾಗೆ ಮಾಡಿದ್ದಕ್ಕೆ ಈ ಹಿಂದೂ ಕಲಾಲರು ಅವರನ್ನು ತಮ್ಮ ಸಮಾಜದಿಂದ ಬೇರೆಯೆಂದು ದೂಡಿದರು. ಅಂದಿನಿಂದ ಇವರು ಘಾಟಕ್ಷತ್ರಿಯ ಇಲ್ಲವೆ ಘಾಟಕಲಾಲ ಎಂಬುದಾಗಿ ದಕ್ಷಿಣ ಮಹಾರಾಷ್ಟ್ರದಲ್ಲಿ ದಕ್ಷಿಣ ಸಂಸ್ಥಾನಗಳಲ್ಲಿ ಅಲ್ಲಲ್ಲಿ ಎಲ್ಲೋ ವಾಸವಾಗಿದ್ದಾರೆ. ಇವರು ಸಮಾಜದಿಂದ ಬೇರೆಯಾದರೂ ಈ ಉದ್ಯೋಗಗಳನ್ನೇ ಮಾಡುತ್ತಿದ್ದಾರೆ. ಇವರನ್ನು ಸಮಾಬಾಹಿರರನ್ನಾಗಿ ಮಾಡಲು ಉಂಟಾದ ಕಾರಣಗಳು ಹೇಗೆ.

ಇಲ್ಲಿ ಹೊಟ್ಟೆತುಂಬ ಅವಕಾಶ ವಿಲ್ಲದ್ದಕ್ಕೆ ಉದ್ಯೋಗಗಳ ಆಶ್ರಯಕ್ಕಾಗಿ ನಿರ್ವಾಹವಿಲ್ಲವೆ ಹೋದರು. ಇವರು ಕ್ಷತ್ರಿಯರು. ಮರಾಠರು ಕ್ಷತ್ರಿಯರು ಕಲಾಲರು ಅಲ್ಲಿ ಅತಿ ಅಲ್ಪ ಸಂಖ್ಯಾಕರು. ಆದ್ದರಿಂದ ಬಹುಸಂಖ್ಯಾಕರಾದ ಮರಾಠರ ಕೆಲ ಪದ್ಧತಿಗಳನ್ನು ಪೂರ್ಣವಾಗಿ ಒಪ್ಪದಿದ್ದರೂ ಕಾಲಕ್ಕೆ ಸರಿಯಾಗಿ ಕೊಂಚವಾದರೂ ಅನುಸರಿಸಬೇಕಾಯಿತು. ಹಾಗೆ

ಮಾಡಿದಕೂಡಲೆ ಹಿಂದೂ ಕಲಾಲರು ಅವರ ಮೇಲೆ ಕೆರಳಿ ನಮ್ಮ ಧರ್ಮ ಪಾತ ಮಾಡಿದವರು ಅಪವಿತ್ರರಾದವರು ಎಂಬ ಆರೋಪಗಳನ್ನು ಹೊರಿಸಿ ಅವರೊಡನಿದ್ದ ಧಾರ್ಮಿಕ ಸಂಬಂಧಗಳನ್ನು ಕಡಿದುಕೊಂಡರು. ಅದು ಹೇಗೆಂದರೆ- ಇದೀಗ ಎಲ್ಲ ಸಮಾಜಗಳಲ್ಲಿ ಪ್ರಚಲಿತವಾಗುತ್ತಲಿರುವ ವಿಧವಾ ವಿವಾಹ ವಿಲ್ಲವೇ! ಮರಾಠರು ವಿಧವಾ ವಿವಾಹಕ್ಕೆ ಒಪ್ಪುವರಲ್ಲದೆ, ಆರೂಢಿಯು ಅವರಲ್ಲಿ ಇಂದು ಹಳೆಯದಾಗಿದೆ. ಅವರ ಬಡಸಾಟಕಗಳಲ್ಲಿ ಇದ್ದವರಾದ ಇವರು ಪರಿಸ್ಥಿತಿಗೆ ತಲೆಬಾಗಿ 'ಬಾಲ ವಿಧವಾ ಪುನರ್ವಿವಾಹ' ವನ್ನು ರೂಢಿಯಲ್ಲಿ ತಂದರು. ಇದರಿಂದ ಆಗಿನ ನಮ್ಮ ಧರ್ಮದ ಪುಂಡ ಮುಖಂಡರು ಇವರ ಮೇಲೆ ವಿಶಿಷ್ಟ ಪರಿಸ್ಥಿತಿಯಿಂದಾಗಿ ತಾತ್ಕಾಲಿಕವಾಗಿ ಪ್ರಚಾರದಲ್ಲಿದ್ದ ಇಂದು ನಿರುಪಯೋಗಿಗಳಾಗಿರುವ ಕೆಲ ನಿಯಮಗಳ ಆಧಾರದಿಂದ ಧರ್ಮ, ನೀತಿ, ನಿಯಮ, ಆಚರಣೆಗಳನ್ನು ಕಳೆದುಕೊಂಡ ವರಾದ ತಾವು ಇವರಿಗೆ ನಮ್ಮ ಧರ್ಮದಿಂದ ಬಹಿಷ್ಕೃತರನ್ನಾಗಿ ಮಾಡಿ ದೂಡಿದರು. ಆದರೂ ಈ ನಿರಪರಾಧಿ ಧರ್ಮ ಬಂಧುಗಳು ಈ ರೀತಿ ನಿರಾಕರಿಸಿದರೆಂದು ಸಿಟ್ಟಿಗೇಳದೆ ಬೇರೆಯಾವ ಧರ್ಮದ ಸೆಳವಿಗೆ ಸಿಗದೆ ಘಾಟ ಕ್ಷತ್ರಿಯರೆಂದು ಚಿಕ್ಕಗುಂಪಾಗಿ ದಕ್ಷಿಣ ಸಂಸ್ಥಾನಗಳಲ್ಲಿ ಕರ್ನಾಟಕದ ಉತ್ತರಭಾಗದಲ್ಲಿ ತಮ್ಮ ಮೇಲೆ ತೆರೆಯ ಮರೆಯಲ್ಲಿ ಎಷ್ಟ ಆಶೆ, ಒತ್ತಾಯಗಳು ಪ್ರಯೋಗಿಸಲ್ಪಟ್ಟರೂ ಅವುಗಳಿಗೊಳಗಾಗದೆ ಇಂದಿಗೂ ಉಚ್ಚ, ಅಚ್ಚ ಸ್ವಚ್ಛ ಹಿಂದೂ ಕ್ಷತ್ರಿಯರು ಹಿಂದೂ 'ಕಲಾಲರೂ ಆಗಿದ್ದಾರೆ. ಘಾಟ ಕಲಾಲರೆಂದು ಕರೆಸುಕೊಳ್ಳುತ್ತಾರೆ. ಇವರೂ ವಿದ್ಯೆಯನ್ನು ಪಡೆಯದೆ ಹಿಂದುಳಿದ. ವಿಲಾಸಿಗಳಾಗಿ ಸುಖದೊಡನೆ ಒಮ್ಮೊಮ್ಮೆ ದುಃಖವನ್ನೂ ಅನುಭವಿಸುತ್ತಿದ್ದಾರೆ.

ಇತ್ತ ಹೀಗಾಗಿ ಕೆಲಜನ ಬಹಿಷ್ಕೃತರಾದಾಗಲೇ ಮತ್ತೊಂದತ್ತ ಕೆಲ ಜನರನ್ನು ಅನ್ಯಾಯವಾಗಿ ಬಹಿಷ್ಕಾರಹಾಕಿ ಅವರನ್ನೂ ನಮ್ಮ ಸಮಾಜದಿಂದ ಹೊರದೂಡಿ ಬಿಟ್ಟಿದ್ದಾರೆ. ಇತ್ತ ಕೆಲಜನ ಬಹಿಷ್ಕೃತರಾದಾಗಲೇ ವತ್ತೊಂದು ಕಡೆಗೆ ಕೆಲಜನರನ್ನು ಬಹಿಷ್ಕಾರಹಾಕಿ ಅವರನ್ನು ನಮ್ಮ ಸಮಾಜದಿಂದ ಬೇರೆಮಾಡಿ ದೂಡಿದರು. ಅದು ಹೇಗೆಂರೆ ಈ

ಹಿಂದೆ ಮದ್ರಾಸ ಬಳ್ಳಾರಿಯ ಕಡೆಯ ಈಳಿಗರು ಮಧ್ಯದಂಗಡಿಗಳ ಮಾರಾಟದ ಹಕ್ಕನ್ನೂ ಪಡೆಯಲು ಕರ್ನಾಟಕಕ್ಕೆ ಬಂದಿದ್ದರು. ಈ ಈಳಿಗರು ಇಲ್ಲಿ ಹೆಚ್ಚಾಗಿ ಅಂಗಡಿಗಳನ್ನೂ ಹಿಡಿಯಲಿಲ್ಲ ಯಾಕಂದರೆ ಇಲ್ಲಿ ಏರಾಟ ಹೆಚ್ಚು ಇತ್ತು, ಕಲಾಲರು. ಅತ್ತ ಫಾರ್ಸಿಗಳು. ಈ ಒಡಿದಾಟದಲ್ಲಿ ಲಾಭವು ಮಾತ್ರ ಅಷ್ಟಕ್ಕಷ್ಟೇ ಹಿಗಾಗಿ ಇವರು ತಮ್ಮ ಕಡೆಯ ಅಂಗಡಿಗಳ ಮಾರಾಟದ ಹಕ್ಕನ್ನೂ ಪಡೆದು ವಿಕ್ರಯ ವಿಶಾರದರಾದ ಕಲಾಲರನ್ನು ನವಕರಿಗಾಗಿ ಅತ್ತ ಕಡೆಗೆ ಒಯ್ಯುವ ಹಂಚಿಕೆ ಮಾಡಿದರು ಅದು ಕೂಡಿಯೂ ಕೂಡಿತು ಯಾಕಂದರೆ ಈ ಏರಾಟದ ಸೆಳವಿನಲ್ಲಿ ಸಿಕ್ಕು ಹೊಲ ಮನೆಗಳನ್ನು ಕಳೆದುಕೊಂಡು ಬಡತನವನ್ನನುಭವಿಸುತ್ತಿರುವ ಕೆಲಜನರು ನವಕರಿಗಾಗಿ ಬಳ್ಳಾರಿ ಹೊಸಪೇಟೆ ಚಿತ್ರದುರ್ಗಗಳ ಕಡೆಗೆ ಹೋಗಿ ಅಲ್ಲಲ್ಲಿ ಮಧ್ಯಮರಾಟದಅಂಗಡಿಗಳಲ್ಲಿ ನವಕರಿ ಮಾಡಹತ್ತಿದರು ಮಾನವನು ವಿಚಿತ್ರಪ್ರಾಣಿ ಅವನಿಗೆ ಆಶೆ ಹತ್ತಿತೆಂದರೆ ತೀರಿತು, ಅದಕ್ಕೆ ಮಿತಿಯೇ ಇಲ್ಲ. ಇಷ್ಟು, ಇನ್ನಷ್ಟು, ಮತ್ತಷ್ಟು ಇತ್ತ ಕಡೆಯದು, ಅತ್ತಕಡೆಯದು ಇನ್ನೂ, ಇನ್ನೂ ಬೇಕು. ಎನ್ನುತ್ತಾನೆ. ಎಷ್ಟು ಸಿಕ್ಕರೂ ಇನ್ನೂ ಬೇಕು ಎಂದು ತನ್ನ ಶಾಂತಿಯನ್ನೇ ಕಳೆದುಕೊಳ್ಳುತ್ತಾನೆ. ಇವರ ಸ್ಥಿತಿಯೂ ಹಾಗೇ ಆಯಿತು. ಈಳಿಗರು ಇವರಿಗೆ ಹೊಟ್ಟೆತುಂಬುವಷ್ಟು ವೇತನಕೊಡುತ್ತಿದ್ದರು. ಆದರೆ ಸಿರಿವಂತಿಕೆಯ ಬಾಳು ನಡಿಸಿದ ಇವರಿಗೆ ಅಷ್ಟು ಹಣ ಸಾಲದು, ಅದಕ್ಕಾಗಿ ಇವರೊಂದು ಯೋಚನೆ ಕಂಡುಹಿಡಿದರು. ಆದೆಂದರೆ- ಮಧ್ಯಕುಡಿಯುವದಕ್ಕಾಗಿ ಬರುವ ಜನರಿಗೆ ಕುಡಿಯುವಾಗ ತಿನ್ನುವ ಪದಾರ್ಥಗಳನ್ನು ತಯಾರಿಸಿ ಅಂಗಡಿಗಳಲ್ಲಿ ಮಾರಾಟ ಮಾಡಹತ್ತಿದರು. ಇದಕ್ಕೆ ಕುಡಕರು 'ಚಾಕಣಾ' ಎಂದರೆ ನಂಚಿಕೊಳ್ಳುವದು ಅನ್ನುತ್ತಾರೆ. ಹೀಗೆ ನಿರ್ವಾಹವಿಲ್ಲದೆ ಹಣಸಂಪಾದನೆಗೆ ಬಿದ್ದು ಅಂಗಡಿಗಳಲ್ಲಿ ಅನ್ನ, ಭಕ್ಕರಿ, ಪಲ್ಯಗಳನ್ನು ಮಾರಹತ್ತಿದರು.

ಇದನ್ನು ಕಂಡು ನಮ್ಮ ಧರ್ಮ ಮುಖಂಡರು ಊಟಮಾಡುವ ಪದಾರ್ಥಗಳನ್ನು ಮಾರುವದು ಕ್ಷತ್ರಿಯ ಧರ್ಮದ ವಿರುದ್ಧ ಎಂದು ಅತ್ತಕಡೆಯವರನ್ನೂ ಅಪರಾಧಿಗಳೆಂದು ನಮ್ಮ ಸಮಾಜದಿಂದ ತಳ್ಳಿಹಾಕಿದರು.

ಹೀಗಾಗಿ ಬಳ್ಳಾರಿಯ ಕಡೆಯವರೂ ಘಾಟಕಲಾಲರಂತೆ ಚಾಕಣಾ ಕಲಾಲರಾದರು. ಬೇರೆಯಾದರು. ಇಷ್ಟರಲ್ಲಿ ವ್ಯಾಪಾರಮಾಡುವದನ್ನರಿತುಕೊಂಡ ಈಳಿಗರು ಇವರನ್ನು ನವಕರಿಯಿಂದ ತಳ್ಳಿಬಿಟ್ಟರು. ಈಗ ಇವರ ಉದ್ಯೋಗವೆಂದರೆ ಚಾಕಣಾ ಮಾರುವದು ಇವರೇ ಇಂದಿನ ಬಳ್ಳಾರಿಯ ಕಡೆಯ ಮಧ್ಯದಂಗಡಿಗಳಲ್ಲಿ ಸಂಚಿಕೊಳ್ಳುವ ಪದಾರ್ಥಗಳನ್ನು ಮಾರುತ್ತಿರುವ ಚಾಕಣಾ ಕಲಾಲರು. ಹೀಗೆ ದಿನಗಳೆದಂತೆ ಈ ಸಮಾಜವು ಅವನತಿಯತ್ತ ಧಾವಿಸಿ ತನ್ನಲ್ಲಿಯೇ ಇಲ್ಲಿಲ್ಲದ ಪಂಗಡಗಳನ್ನು ಮಾಡಿಕೊಂಡು ಅಧೋಗತಿಗಿಳಿದಿದೆ ದೈವವಿಲಾಸಕ್ಕೆ ಯಾರೇನು ಮಾಡಬೇಕಾಗಿದೆ. ಹೀಗೆ ಕಾರಣವಿಲ್ಲದೆ ಮೊದಲಿಗೆ ಕೆಲ ಜನರನ್ನೂ ಹೊರದೂಡಿ ತನ್ನ ಬಲವನ್ನು ಕಡಿಮೆಮಾಡಿಕೊಂಡು ಧರ್ಮಾಚರಣೆಯಲ್ಲಿ ತಾವು ಎಷ್ಟೊಂದು ನಿಷ್ಠುರರಾಗಿದ್ದೇವೆ. ಎಂಬುದನ್ನು ಪರಸಮಾಜಗಳಲ್ಲಿ ತೋರಿಸುವ ಹಂಬಲದ ಹುಮ್ಮಸ್ಸಿನಿಂದ ತನ್ನ ಕುತ್ತಿಗೆಯನ್ನು ತಾನೇ ಕೊಯ್ದುಕೊಂಡುಬಿಟ್ಟಿದೆ. ಸಮಾಜದ ಹಿತವೆಂಬ ದಬ್ಬಾಳಿಕೆಯನ್ನು ಆರಂಭಿಸಿ ತನ್ನ ಬಲಕ್ಕೆ ತಾನೇ ಪೆಟ್ಟುಕೊಟ್ಟು ದುರ್ಬಲವಾಗಿ ಮನುಷ್ಯತ್ವದಿಂದ ದೂರಸಾಗುತ್ತ ಪರಿಸ್ಥಿತಿಯ ದೋಷಕ್ಕೆ ಒಳಗಾಗಿ ಇತರ ಸಮಾಜಗಳನ್ನು ನೋಡದೆ ತನ್ನನ್ನು ತಾನೇ ಧನ್ಯವೆಂದು ನಂಬಿ ತನ್ನಲ್ಲಿಯೇ ಹಿಂದೂ ಕಲಾಲ, ಮುಸ್ಲಿಂ ಕಲಾಲ, ಘಾಟ ಕಲಾಲ, ಚಾಕಣಾ ಕಲಾಲ ಎಂದು ಏನೇನೋ ಭೇದಗಳನ್ನು ಕಲ್ಪಿಸಿ ದೀನರಾಗಿದ್ದಾರೆ. ಹೀನವಾದ ಮನಸ್ಸು ನಿರ್ಣಯವಿಲ್ಲದ ಬುದ್ಧಿ ಗುರಿಯಿಲ್ಲದ ಜೀವನಗಳಿಂದ ಸ್ವಕರ್ತವ್ಯವನ್ನು ಮರೆತು ಅಜ್ಞಾನದ ಅಡವಿಯಲ್ಲಿ ಜ್ಞಾನದ ದಾರಿಯನ್ನು ಕಾಣದೆ ಪತಿತರಾಗಿ ತೊಳಲುತ್ತ ಸಾಗಿದ್ದಾರೆ. ಹೀಗೆ ನಮ್ಮ ಧರ್ಮ ಸಮಾಜ ಮುಖಂಡರು ತಮ್ಮ ಅಧಿಕಾರದ ಉಪಯೋಗವನ್ನು ಈ ರೀತಿ ಅರಿಯದ ಅಂಜುಬುರುಕ ಜನತೆಯಮೇಲೆ ಮಾಡುತ್ತ ಅನೇಕ ಸಮಸ್ಯೆಗಳನ್ನು ಕಟ್ಟಿಕೊಂಡು ಮುಳುಗಹತ್ತಿದೆ. ಭಾರತವೆಲ್ಲವೂ ಇಂದು ಎಚ್ಚರಾಗಿ ಶಿಕ್ಷಣ, ಉದ್ಯೋಗ, ವಿವಾಹ, ಧರ್ಮ, ರಾಜಕಾರಣಗಳಲ್ಲಿ ತಮ್ಮ ಸ್ಥಾನಗಳನ್ನರಿತು ಎಲ್ಲ ಸಮಸ್ಯೆಗಳ ಪರಿಹಾರಕ್ಕೆ ಅಂಜನವಾಗಿರುವ ಸ್ವಾತಂತ್ರ್ಯ ಸಂಪಾದನೆಗಾಗಿ ಹೋರಾಡುತ್ತಿರುವಾಗ ಈ ಕ್ಷತ್ರಿಯರು ಇದಾವದನ್ನೂ

ಲಕ್ಷಿಸದೆ ಹಿಂದೆ ಹಿಂದೆ ಸಾಗುತ್ತ ಕಾಣದಂತಾಗಹತ್ತಿದೆ. ಜೊತೆಯಲ್ಲಿ ದುರಭಿಮಾನವನ್ನೂ ತಾಳಿದೆ. ಇನ್ನೂ ಎಷ್ಟು ಪಂಗಡಗಳನ್ನು ಮಾಡಿಕೊಳ್ಳುತ್ತಿದೆಯೋ ನೋಡಬೇಕು. ಆದರೆ ಈ ಎಲ್ಲ ಪಂಗಡಗಳು ಮೂಲದಲ್ಲಿ ಒಂದೇ ಆದ್ದರಿಂದ ಇವರೆಲ್ಲರೂ ತಾವೆಲ್ಲರೂ ಕ್ಷತ್ರಿಯರು ಎಂಬುದನ್ನು ಎಂಥ ಪ್ರಸಂಗ ಬಂದರೂ ಅದನ್ನು ಶಾಂತವಾಗಿ ಎದುರಿಸಿ ಹಿಂದುಗಳಾಗಿಯೇ ಕ್ಷತ್ರಿಯರಾಗಿಯೇ ಇದ್ದಾರೆ. ಇಂಥ ನಿರಾಶೆಯಲ್ಲಿಯೇ ಆಶೆಯೇನಾದರೂ ಕಾಣುತ್ತದೆಯೇ ನೋಡಬೇಕು. ಯಾರು ಬಲ್ಲರು 'ತಿಪ್ಪೆಯೂ ಉಪ್ಪರಿಗೆ ಆಗುತ್ತದಂತೆ' ಅಲ್ಲವೆ.



# ಅಂದು-ಇಂದು

ಈ ಕ್ಷತ್ರಿಯರು ಕನ್ನಡನಾಡಿಗೆ ಬಂದು ಸುಮಾರು ಎರಡು ಶತಮಾನಗಳಲ್ಲಿ ಪೂರ್ಣವಾಗಿ ಅಧೋಗತಿಯನ್ನು ಹೊಂದಿದರು. ಇದಕ್ಕೆ ಕಾರಣವೆಂದರೆ- ಅಲ್ಪ ಸಂಖ್ಯಾಕರು. ಉತ್ಸಾಹಕೊಡಲು ಯಾರೂ ಸಹಾಯಕರಿಲ್ಲ ಅಲ್ಲೋಲಕಲ್ಲೋಲವಾದ ರಾಜಕಾರಣದ ಪರಿಸ್ಥಿತಿಯ ಜೊತೆಗೆ ಅಜ್ಞಾನ ಅಹಂಕಾರಗಳ ಬೆಳವಣಿಗೆ ಈ ಸ್ಥಿತಿಯಲ್ಲಿ ಅವರ ಪ್ರಗತಿಯು ಗಾಳಿಗೆ ಸಿಕ್ಕ ಮೋಡದಂತೆ ಹಂಚಿ ಹರಿದು ಮಾಯವಾಗಿ ಹೋಯಿತು. ಪವಿತ್ರವಾದ ಉದ್ದೇಶ ಸಾಧನೆ ಮಾಡಿಕೊಳ್ಳಲು ಮಾನವಜೀವಿಗೆ ಅಶಕ್ಯವಾದುದೇನಿಲ್ಲ. ಜನ್ಮಜನ್ಮಾಂತರಗಳಿಂದ ನಡೆದು ಬಂದ ಪವಿತ್ರತೆಯನ್ನು ಕಾಯ್ದುಕೊಳ್ಳುವದು ಇವರಿಗೆ ಅಸಾಧ್ಯವಾದುದೂ ಆಗಿರಲಿಲ್ಲ. ಆದರೆ ಅವರ ಮನಸ್ಸು ಪೂರ್ವದ ಪವಿತ್ರ ಸಂಸ್ಕಾರಗಳ ದಾರಿಯನ್ನು ಬಿಟ್ಟು ಕಾಡಿನಲ್ಲಿ ಸಾಗಿತ್ತು. ಯಾಕೆಂದರೆ ಮುಸ್ಲಿಂ ಕಲ್ಲಾಲರನ್ನು ಎಂದರೆ ಟೀಪೂ ಸುಲ್ತಾನನ ಕಾಲಕ್ಕೆ ಸಂಕಟಪಟ್ಟವರನ್ನು ಇವರು ನಿಷ್ಠುರತೆಯಿಂದ ಎಂದು ಕಂಡರೋ ಅಂದೇ ಇವರ ಸಂಸ್ಕೃತಿಯು ಬಿರುಗಾಳಿಗೆ ಸಿಕ್ಕು ತೂರಿ ಹಾರಿ ಮಾಯವಾಯಿತು. ದುರಭಿಮಾನದ ಬಂಧನದಲ್ಲಿ ಸಿಕ್ಕು ಗಾಸಿಯಾಗಿ ಕುಗ್ಗಿಹೋಯಿತು. ಅಭಿಮಾನವು ಮಾನವನಿಗೆ ಅವಶ್ಯ. ಅದರಿಂದಲೇ ಅವನಿಗೆ ಜೀವಕಳೆ ತುಂಬುವದು. ಈ ಕ್ಷತ್ರಿಯರು ರಜಪೂತ ಸ್ಥಾನದಿಂದ ಬಂದವರು. ಅಕಬರನಂಥ ವೀರಾಧಿವೀರನು ಅನುಯಾಯಿಗಳನ್ನು ಲೆಕ್ಕಿಸಿದವರು. ಸ್ವಾಭಿಮಾನಿ ರಾಣಾಪ್ರತಾಪನ ಅನುಯಾಯಿಗಳು ಹಿಂದೂ ಧರ್ಮದ ಹೆಚ್ಚಿನ ಅಭಿಮಾನಿಗಳಲ್ಲದೆ ಅದರ ಪೂಜಕರು

ಅಂತೆಯೇ ಆವರಿಗೆ ದಾರಿಯಲ್ಲಿ ಎಂಥ ಕಷ್ಟ ಸಂಕಟಗಳು ಉಂಟಾದರೂ ಅವುಗಳನ್ನು ಲೆಕ್ಕಿಸದೆ ಶಾಂತವಾಗಿ ಎಲ್ಲ ಎಡರುಗಳನ್ನು ದಾಟಿದರು. ಅವರು ಇಲ್ಲಿ ಬಂದರು ಆಶ್ರವೂ ಸಿಕ್ಕಿತು. ಕೂಡಲೇ ಇವರು ಜಂಭದ ಕೋಳಿಗಳಾದರು. ಆಗ ಇವರ ಸತ್ಯ ದೃಷ್ಟಿಯು ಮೆಲ್ಲನೆ ಅಳಿಯುತ್ತ ಬಂದು ತಾವು ಶ್ರೇಷ್ಠವಾಗಿದ್ದೇವೆ. ಎಂಬ ದುರಭಿಮಾನವು ಪ್ರತಿಯಾಗಿ ಸಂಚಯುವಾಗಹತ್ತಿತು. ಕೂಡಲೇ ಇವರ ಪ್ರಗತಿಯು ಹರಿಗಡಿಯಿತು. ಸದಭಿಮಾನಕ್ಕೆ ಬದಲು ದುರಭಿಮಾನ ಆ ದುರಭಿಮಾನದಿಂದ ಅವನತಿ.

ಮನುಷ್ಯನ ವ್ಯವಹಾರವು ಬಹು ವಿಚಿತ್ರ. ಅವನು ನಿಸರ್ಗದಲ್ಲಿ ದೇವರಿಂದ ಪಡೆದ ಬುದ್ಧಿ ಮನಸ್ಸುಗಳ ಉಪಯೋಗದಿಂದ ಜಗತ್ತಿನ ಸಹ ಜನತೆಯನ್ನು ಗೆದ್ದು ತನ್ನ ಕೃತಿಮತಿಯ ರಾಜ್ಯ ಸ್ಥಾಪಿಸುವನು. ಅದಕ್ಕಾಗಿ ಅವನು ಧರ್ಮ ಶಾಸ್ತ್ರಗಳನ್ನು ರಚಿಸಿ ಜನತೆಯಲ್ಲಿ ಹರಡಿದ್ದಾನೆ ನಿಜವಾಗಿ ತನ್ನ ಧರ್ಮದಂತೆ ನಡೆದರೆ ಅವನ ಜೀವವು ಸುಖ ಸಮಾಧಾನಗಳಿಂದ ತುಂಬಿತುಳುಕುವದು ಮನುಷ್ಯನು ಜಗತ್ತಿನಲ್ಲಿ ಮೊದಲು ಹಾಗೇ ಸಾಗಿದ್ದನು. ನಂತರ ಅವನು ಸಾಮಾನ್ಯ ಜನತೆಯನ್ನು ಮೆಚ್ಚಿಸಿ ತಾನು ದೊಡ್ಡ ಮನುಷ್ಯನೆಂದು ತಿಳಿದು ತನ್ನ ವ್ಯಕ್ತಿತ್ವದ ಅರಿವನ್ನು ಮರೆತು ತನ್ನ ಆಕಾಂಕ್ಷೆಗಳ ಲೆಕ್ಕಹಾಕಿದ್ದಾನೆ. ಇಲ್ಲಿ ಆರಂಭವಾಗಿದೆ. ಅಧೋಗತಿ. ಕೂಡಲೇ ಆವನು ಸಮಾಜದ ಹಿತಾಹಿತಗಳನ್ನು ಮರೆತಿದ್ದಾನೆ. ತನ್ನ ಆಶೆ ಇಚ್ಛೆಗಳಿಗೆ ವಿರುದ್ಧವಾದ ಕೃತಿಯು ಘಟಿಸಿದ ಕೂಡಲೇ ರೇಗಿದ್ದಾನೆ. ಜನತೆಯ ಅಭಿಪ್ರಾಯವನ್ನು ಕಂಡು ಗೊಂದಲದಲ್ಲಿ ಬಿದ್ದು ತನ್ನನ್ನು ಮೀಕ್ಕುತ್ತಿರುವರಲ್ಲಾ ಎಂದು ಉರಿದು ಬಿದ್ದು ಅಡ್ಡದಾರಿ ಹಿಡಿದಿದ್ದಾನೆ. ಕ್ಷತ್ರಿಯ ಸಮಾಜದ ಸ್ಥಿತಿಯು ಹೀಗೆಯೇ, ಇವರು ಇಲ್ಲಿ ಬಂದಾಗ ಜನತೆಯು ಇವರ ಪ್ರತಿಯೊಂದು ಕೃತಿಯ ಬಗ್ಗೆ ಅಚ್ಚರಿಯಿಂದ ನೋಡುತ್ತಿದ್ದರು. ರಾಜಕಾರಣ ಧರ್ಮಗಳ ಭಯಾನಕವಾದ ಕೋಲಾಹಲದಲ್ಲಿ ಇವರು ತಟಸ್ಥರಾಗುಳಿದರು. ಉಳಿದವರ ಮೇಲೆ ಎಂಥ ಭೀಕರ ಆಘಾದಗಳಾದರೂ ಇವರು ತಪ್ಪಿಸಿಕೊಂಡರು. ಶಿಕ್ಕರೂ ಧೈರ್ಯದಿಂದ ಎದುರಿಸಿದರು. ಆಗಲೇ ದುರ್ದೈವವು ಇವರಲ್ಲಿ ದುರಭಿಮಾನವನ್ನು

ಹುಟ್ಟಿಸಿ ಮುಖ್ಯವಾದ ತತ್ವವನ್ನು ಕೆಡವಿ ಉರುಳಿಸಿಬಿಟ್ಟಿತು. ಕಷ್ಟದಲ್ಲಿ ಸಿಲುಕಿ ಪಾರಾಗಿ ಬಂದ ತಮ್ಮ ಬಂಧುಗಳನ್ನು ತಮ್ಮ ಧರ್ಮದಿಂದ ಹೊರದೂಡಿದಾಗ ಇವರ ಸಂಘಟನಾ ಶಕ್ತಿಯು ಕುಂದಿತು. ಜೊತೆಗೆ ಯಾವದೋ ಕಾರಣದಿಂದ ತಮ್ಮ ಧರ್ಮದ ಸುರಕ್ಷಿತತೆಯ ಬಗ್ಗೆ ಇವರಿಗೆ ಅಂಜಿಕೆಯಾಗಹತ್ತಿತು. ಉಳಿದ ಬಹು ಸಂಖ್ಯಾಕ ಸಮಾಜಗಳ ಎದುರಿಗೆ ತಮ್ಮ ಅಲ್ಪತೆಯು ಸ್ಪಷ್ಟವಾಗಿ ಕಾಣಹತ್ತಿತು ಉಳಿದವರು ಏನೇ ಮಾಡಲಿ ಹೇಗೇ ಸಾಗಲಿ ತಾವು ಮಾತ್ರ ತಮ್ಮ ಸ್ಥಾನವನ್ನು ಎತ್ತಿ ತೋರಿಸಲು ಆತುರರಾದರು. ಅದಕ್ಕಾಗಿ ತಮ್ಮವರು ಸ್ವಲ್ಪ ಹೆಚ್ಚು ಕಡಿಮೆ ಮಾಡಿದರೆ ನಾಕು. ಕೂಡಲೇ ಯೋಗ್ಯಾಯೋಗ್ಯಗಳ ವಿಚಾರಮಾಡದೆ ಅವರೊಡನೆ ಹೆಚ್ಚು ನಿಷ್ಠುರತೆಯಿಂದ ನಡೆಯಹತ್ತಿದರು. ಮುಸ್ಲಿಂ ಕಲಾಲರನ್ನು ಹೊರಗೆಹಾಕಿದರು. ಘಾಟಕಲಾಲರನ್ನು ಹೊರದೂಡಿದರು. ಚಾಕಣಾ ಕಲಾಲರನ್ನು ಅಟ್ಟಿಬಿಟ್ಟರು. ಅವರೆಲ್ಲ ಇವರಿಗೆ ತುಚ್ಛರಾಗಿ ಕಾಣಹತ್ತಿದರು. ಪರಿಸ್ಥಿತಿಯನ್ನು ಎದುರಿಸಲಾರದೆ ಎದುರಿಸಿದರೂ ಲಾಭವಿಲ್ಲೆಂದರಿತು ಮಾರ್ಪಡಿಸಿಕೊಂಡು ಬಾಳಲು ಪ್ರಯತ್ನಿಸಿದ್ದಕ್ಕೆ ಇವರು ಸೇರಲಿಲ್ಲ. ಪವಿತ್ರ ಸೂರ್ಯವಂಶದ ಅವಹೇಳನಮಾಡಿದವರು ಎಂದು ದೂರಮಾಡಿದರು. ಈಗವರು ಇದುಸರಿ, ಇದುತಪ್ಪು ಎನ್ನುವದನ್ನು ವಿಚಾರಮಾಡುವಷ್ಟು ಬುದ್ಧಿ ಶಕ್ತಿಗಳನ್ನು ಉಳಿಸಿಕೊಂಡಿರಲಿಲ್ಲ. ತಮ್ಮ ಪರಂಪರಾಗತ ನಡತೆಯಲ್ಲಿ ಕೊಂಚವೂ ಹೆಚ್ಚು ಕಡಿಮೆಯಾಗಬಾರದೆಂದು ನಿಶ್ಚಯಿಸಿದರು. ಆದರೆ ಈ ವಿಚಾರ ಈ ನಡತೆಗಳು ತಮ್ಮ ನಾಶಕ್ಕೆ ಕಾರಣವಾಗುವವು. ಎಂಬುದವರಿಗೆ ತಿಳಿಯದಾಯಿತು. ಧರ್ಮದ ದುರಭಿಮಾನತೆಯಿಂದ ತಮ್ಮ ಕುತ್ತಿಗೆಯನ್ನು ತಾವೇ ಹಿಚುಕಿಕೊಂಡರು. ಪಕ್ಷ ಪಂಗಡಗಳನ್ನು ಮಾಡಿ ಅಲ್ಪ ಸಂಖ್ಯಾಕರಲ್ಲಿ ಅಲ್ಪ ಸಂಖ್ಯಾಕರಾಗಿ ಜೀವನಕ್ಕೆ ಯೋಗ್ಯ ಮಾರ್ಗವನ್ನು ಕಾಣದೆ ಎಲ್ಲರೂ ಮುಂದೆ ಸಾಗಲೆತ್ನಿಸಿದರೆ ಇವರು ಹಿಂದುಳಿದು ಅಡ್ಡದಾರಿಹಿಡಿದು ಅವನತಿಯ ಮಹಾಕೂಟದಲ್ಲಿ ಬಿದ್ದರು. ಯಾವ ಕ್ಷತ್ರಿಯರು ಕ್ಷತ್ರಿಯತ್ವದ ಪವಿತ್ರರಕ್ಷಣೆಗಾಗಿ ದೇಶಾಂತರಕ್ಕೆ ಬಂದಿದ್ದರೋ ಅದೇ ಕ್ಷತ್ರಿಯರು ತಮ್ಮವರಿಗೆ ತಾವೇ ವಂಚಿಸಿ ತಾವು ದೊಡ್ಡವರೆಂದು ತೋರಿಸಹೋಗಿ ಬುದ್ಧಿಯಿಲ್ಲದೆ ಅಡ್ಡಹಾದಿಯನ್ನು ಹಿಡಿದು ಬಿಟ್ಟಿದ್ದಾರೆ.

ಪವಿತ್ರ ಧರ್ಮರಕ್ಷಣೆಗೆ ಪ್ರತಿಯಾಗಿ ಅಧರ್ಮದ ಅಹಂಕಾರಾಚರಣೆ ನಿಷ್ಠಾಯುಕ್ತತೆಗೆ ಬದಲು ಕಠೋರತೆ ಜಾರಕರ್ಮಕ್ಕಿಂತ ಹೀನವಾದ ಕ್ರೂರಕರ್ಮದಿಂದ ಜೀವನದ ಉಯ್ಯಾಲೆತೂಗುತ್ತಿದ್ದಾರೆ. ದಿನಕಳೆದಂತೆ ದುರ್ಗತಿ ದುರ್ಗತಿಯಿಂದ ಅಧೋಗತಿ ಈ ಅಧೋಗತಿಯನ್ನು ಇಂದು ಎಲ್ಲಾ ಸೂರ್ಯವಂಶ ಕ್ಷತ್ರಿಯ ಪೀಳಿಗೆಯೂ ಅನುಭವಿಸುತ್ತದೆ. ಭಾರತದಲ್ಲಿ ಇಂದು ಎಲ್ಲರೂ ಸ್ವಾತಂತ್ರ್ಯಸಾಧನೆಗಾಗಿ ಹೋರಾಡುತ್ತಿರುವಾಗ ಇವರು ಇದರ ಗಾಳಿಕೂಡಾ ಸೋಂಕದಂತೆ ಜೀವನ್ಮೃತರಾಗಿ ಹೇಗೆಹೇಗೋ ಬಾಳುದೂಡುತ್ತಿದ್ದಾರೆ. ಹಾಗಾದರೆ ಕ್ಷತ್ರಿಯರಿಗೆ ಈ ಅಧೋಗತಿಯಿಂದ ಬಿಡುಗಡೆ ಆಗಲಾರದೋ, ಅವರು ಕೊನೆಯವರೆಗೆ ಹಾಗೆ ದುರ್ಗತಿಯ ಕೊಳಚೆಯಲ್ಲಿಯೇ ಕೊಳೆಯುವರೋ, ಅಥವಾ ಯಾರಾದರೂ ಇವರ ಉನ್ನತಿಗಾಗಿ ಹೋರಾಡಿದ್ದಾರೋ ಅದಕ್ಕೆ ಮತ್ಯಾವ ಅತಂಕಗಳು ಬಂದಿವೆ ಅವುಗಳನ್ನು ನೀಗಿಸುವಪಕ್ಕಾಗಿ ಏನಾದರೂ ಆಶೆಯ ಅಂಶವಿದೆಯೇ, ಇದ್ದರೆ ಹೇಗಿದೆ. ಏನಿದೆ, ಎಲ್ಲಿದೆ, ಎಲ್ಲಿಯ ವರೆಗೆ ಸಾಗಿದೆ. ಅಥವಾ ಅದಕ್ಕೂ ಮತ್ತೇನಾದರೂ ಕಂಟಕ ಬಂದಿದೆಯೋ, ಎಂಬುದನ್ನು ಮುಂದಿನ ಪ್ರಕರಣ ದಲ್ಲಿ ನಿರೀಕ್ಷಿಸುವಾ-

ಹೀಗೆ ಸೂರ್ಯವಂಶ ಕ್ಷತ್ರಿಯರು ಕಾಲಚಕ್ರಕ್ಕೆ ಸಿಲುಕಿ ಕಳಾಲ ರಾದರು. ಇಷ್ಟಕ್ಕೇ ವಿಧಿಯು ಇವರ ಬೆನ್ನು ಬಿಡದೆ ಕಟುಕರನ್ನು ಮಾಡಿತು.



# ಪ್ರಗತಿಗಾಗಿ ಆಶೆ

ಹೀಗೆ ಇವರು ನಿರ್ಗುರಿಯಿಂದ ಬಾಳು ನಡೆಯಿಸಿರಲು ಭಾರತದಾದ್ಯಂತವೂ ಪಮ್ಮವರ ದುರಭಿಮಾನದ ಪರಿಣಾಮದಿಂದಾಗಿ ಪರಧರ್ಮ ಪ್ರಚಾರದ ಗಾಳಿಬೀಸಹತ್ತಿತು. ಅವರೆಲ್ಲ ನಮ್ಮ ಹಿಂದೂ ಧರ್ಮಕ್ಕಿಂತ ತಮ್ಮ ಧರ್ಮವೇ ಶ್ರೇಷ್ಠವಾದುದೆಂದು ಪ್ರಚಾರನಡೆಸಿದರು. ಇದರಿಂದಾಗಿ ಮೇಲ್ಜಾತಿಯವರಿಂದ ಮನನೊಂದುವರು. ಅತ್ತ ಹೋಗಲು ಪ್ರಯತ್ನಿಸಹತ್ತಿದರು ರಾಷ್ಟ್ರದ ತುಂಬೆಲ್ಲ ಅಜ್ಞಾನ, ಅಂಜಿಕೆ, ದುರಭಿಮಾನಗಳು ತುಂಬಿತುಳುಕುತ್ತಿರುವಾಗ ಪರಧರ್ಮದ ಪ್ರಚಾರದಿಂದ ಹಿಂದೂ ಧರ್ಮ ತಾಯಿಯ ಮೇಲೆ ಬಲವಾದ ಆಘಾತವಾಯಿತು. ಆ ದುರ್ದೆಸೆಯಿಂದ ಅವಳ ಅಭಿಮಾನಿಪುತ್ರರು ಎಚ್ಚತ್ತು ಜನತೆಯಲ್ಲಿ ಅಚ್ಚರಿಗೊಳ್ಳುವಂತೆ ಹಿಂದೂ ಧರ್ಮದ ಪವಿತ್ರತೆ ವಿಶಾಲತೆಗಳನ್ನು ಭಾರತದ ತುಂಬಾ ಅಷ್ಟೇ ಏಕೆ ಕಡಲಿನಾಚೆ ಕೂಡ ತೋರಿಸಿದರು ಹಿಂತಹ ತಾಯಿಯ ಉಚ್ಚತೆಯನ್ನು ಜಗತ್ತಿನ ಜನವೆಲ್ಲ ಕಂಡು ಭಕ್ತಿಯಿಂದ ಬಾಗಿತು. ಭಾರತಾಂಬೆಯ ಪ್ರಿಯ ಪುತ್ರರಾದ ಪರಮಹಂಸ, ವಿವೇಕಾನಂದರು ನಮ್ಮ ಶ್ರೇಷ್ಠತೆಯನ್ನು ಎತ್ತಿ ತೋರಿಸಿದರು. ಆಗ ಜನತೆಯು ಜಾಗ್ರತವಾಗಿ ತಮ್ಮ ದುರಭಿಮಾನವನ್ನು ಬಿಟ್ಟು ಸಂಘಟಿತರಾಗಿ ಸಡಿಲಾಗುತ್ತಿರುವ ಧರ್ಮದ ಕೀಲುಗಳನ್ನು ಘಟ್ಟಿಯಾಗಿರಿಸಿದರು. ಮತ್ತು ತಮ್ಮ ಅವನತಿಗೆ ಕಾರಣವಾದ ಧರ್ಮದ ಒಡಕುಗಳನ್ನು ಮುಚ್ಚಿ ಹಿಂದುಗಳೆಲ್ಲ ಒಂದಾಗಹತ್ತಿದರು. ಆದರೆ ಈ ಕ್ಷತ್ರಿಯರು ಮಾತ್ರ ಅಚಲರಾಗದೆ ಹಾಗೇ ಇದ್ದರು ಕೆಲ ಕಾಲದ ನಂತರ ಗಾಂಧೀಯುಗದ ಪರಿಣಾಮವಾಗಿ ಸರಕಾರವು ಹಿಂದು

ಳಿದ ಸಮಾಜಗಳ ಸುಧಾರಣೆಗಾಗಿ ಪ್ರಯತ್ನಿಸಿ ಅವರಿಗಾಗಿ ಶಿಕ್ಷಣ, ನವಕರಿಗಳ ಅನುಕೂಲತೆಗಳನ್ನು ಮಾಡಿಕೊಡಹತ್ತಿತು. ಇದರಿಂದಾಗಿ ಕಾಡು ಜನಾಂಗಗಳು ತಮ್ಮ ಕಾಡುತನವನ್ನು ಕಳಚಿ ಮೆಲ್ಲಮೆಲ್ಲನೆ ಸರಕಾರದಲ್ಲಿ ನವಕರಿಯನ್ನಾರಂಭಿಸಿದರು ಇದನ್ನು ಕಂಡು ಈ ಕಲಾಲರಲ್ಲಿಯೂ ತಾವೂ ವಿದ್ಯೆಕಲಿಯಬೇಕು. ಮುಂದಾಗಬೇಕು. ನವಕರಿಮಾಡಬೇಕು. ಇತರ ಸಮಾಜಗಳಲ್ಲಿ ಮರ್ಯಾದೆಪಡಬೇಕು. ಎಂಬ ಹಂಬಲವು ವುಂಟಾಗಿ ಹುಬ್ಬಳ್ಳಿಯಲ್ಲಿ ಸನ್ ೧೯೧೪-೧೫ ರ ಸುಮಾರಕ್ಕೆ ಹುಬ್ಬಳ್ಳಿಯ ಕೆಲ ಪ್ರಮುಖರು ಪ್ರಯತ್ನಿಸಿ ಅಖಿಲ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಪರಿಷತ್ತನ್ನು ಸೇರಿಸಿದರು ಅದಕ್ಕೆ ಕರ್ನಾಟಕದ ಬೇರೆಬೇರೆ ಭಾಗಗಳಿಂದ ಸಮಾಜದ ಆಗಿನ ಕೆಲ ಹಿರಿಯರು ಆಗಮಿಸಿದ್ದರು. ಸಭೆಯಲ್ಲಿ ತಾವು ಹಿಂದುಳಿದವರು ಎಂಬುದನ್ನು ಹೇಳಿಕೊಳ್ಳುವ ವಿಷಯದಲ್ಲಿ ಮತಭೇದವಾಗಿ ಕೊನೆಗೆ ಯಾವ ನಿರ್ಣಯಕ್ಕೂ ಬಾರದೆ ಪರಿಷತ್ತು ಮುರಿದು ಹೋಯಿತು. ಹೀಗೆ ಸಂಘಟನೆ ಮಾಡಲು ಪ್ರಯತ್ನಿಸಿದರೂ ಆಗದೆ ಮೊದಲಿನಂತೆ ಉಳಿದುಬಿಟ್ಟರು. ಪರಿಷತ್ತೇನೋ ಮುರಿಯಿತು. ಕೆಲ ದಿನಗಳನಂತರ ಹಿರಿಯರಿಗೆ ತಮ್ಮ ದೀನಸ್ಥಿತಿಯು ತಾಂಡವತೆಯು ಕಣ್ಣೆದುರಿಗೆ ಕುಣಿಯಹತ್ತಿತು. ಶಾಂತಮನಸ್ಸಿನಿಂದ ತಮ್ಮ ಹೀನತೆಯ ಬಗ್ಗೆ ತಮ್ಮಲ್ಲೇ ವಿಚಾರಿಸಿಕೊಂಡರು, ತಮ್ಮ ತಪ್ಪು ತಮಗೆ ತಿಳಿಯಿತು. ಅದಕ್ಕಾಗಿ ಅವರಿಗೆ ಪಶ್ಚಾತ್ತಾಪವಾಯಿತು.

ಹೀಗೆ ಕೆಲವರ್ಷ ಸಾಗಿದಾಗ ಸನ್ ೧೯೨೫ ನೇ ಇಸ್ವಿ ಸುಮಾರಕ್ಕೆ ಕಲಘಟಗಿ (ಧಾರವಾಡ ಜಿಲ್ಹೆ) ಯಲ್ಲಿ ದಿ. ಗಂಗಾಜಿರಾವ್ ಭಡಂಕರರೆಂಬವರು ವಿದ್ಯೆಕಲಿತು ಮುಂದೆ ಬಂದರು. ಅವರಿಗೆ ತಮ್ಮ ಸಮಾಜದ ದೀನ ಪರಿಸ್ಥಿತಿಯಿಂದಾಗಿ ಬಹಳ ದುಃಖವಾಯಿತು ಆದರ ಉದ್ಧಾರಕ್ಕಾಗಿ ಏನು ಮಾಡಬೇಕು. ಎಂದು ಯೋಚಿಸುತ್ತಿದ್ದಾಗ ತಮಗೆ ಯಾರಾದರೂ ಸಹಾಯಮಾಡಬಹುದೇನೆಂದು ಅತ್ತಿತ್ತ ಆಶಾ ದೃಷ್ಟಿಯಿಂದ ಸುತ್ತಾಡಿದರು. ಆದರೆ ಅವರಿಗೆ ಯಾರೂ ಸಹಾಯಮಾಡಲಿಲ್ಲ ಆದರೂ ಅವರು ನಿರಾಶೆಯಲ್ಲಿಯೇ ಆಶೆಯ ಕಿರುಬೆಳಕನ್ನಾದರೂ ಕಾಣುವ ಹಂಬಲದಿಂದಿರುವಾಗ ಅಲ್ಲಿಗೆ ಶ್ರೀ ತುಕಾರಾಮರಾವ್ ಮೆಹತರಕರರವರು ಅಬಕಾರಿ ಕಂಟ್ರಾಕ್ಟ

ಹಿಡಿದು ಬಂದರು ಅವರೂ ನಮ್ಮ ಸಮಾಜವು ಏನು ಮಾಡಿದರೆ ಪ್ರಗತಿಯಾದೀತು ಎಂದು ಚಡಪಡಿಸುವವರು. ಇಬ್ಬರೂ ಕೂಡುವಿಕೆಯಿಂದ ಪರಸ್ಪರ ವಿಚಾರ ವಿನಿಮಯದಿಂದ ಏನೊಂದು ಕಾರ್ಯವಾಗದಿದ್ದರೂ ಅವರಿಗೆ ಅಭೂತಪೂರ್ವವಾದ ಆಶೆಯೊಂದು ಕಾಣಹತ್ತಿತು. ಉತ್ಸಾಹವು ಉಕ್ಕಿತು. ಏನಾದರೂ ಮಾಡಿ ಮುರಿದುಹೋದ ಪರಿಷತ್ತನ್ನು ಸ್ಥಾಪಿಸಲಿಕ್ಕೆ ಪ್ರಯತ್ನಿಸೋಣ. ಎಂದು ಯೋಚಿಸುತ್ತಿದ್ದಾಗಲೇ ಅಲ್ಲಿಗೆ ಶ್ರೀ ಪರಶುರಾಮರಾವ ಮಿರ್ಜಕರರು ಕಲಘಟಗಿ ತಾಲೂಕ ಕಚೇರಿಗೆ ವರ್ಗವಾಗಿ ಬಂದರು. ಇವರೇ ಈ ಗ್ರಂಥದ ಮುನ್ನುಡಿಕಾರರು ಅವರಂತೂ ನಮ್ಮ ಸಮಾಜದ ಕಟ್ಟಾ ಅಭಿಮಾನಿಗಳು. ಅವರೂ, ಇವರೂ ಒಂದಾಗಿ ವಿಚಾರಿಸಿ; ಒಂದು ದಾರಿ ಹುಡುಕಿದರು. ಮೊದಲು ಕಲಘಟಗಿ ಸೂರ್ಯವಂಶ ಕ್ಷತ್ರಿಯ ಸಂಘ ಸ್ಥಾಪಿಸಬೇಕೆಂದು ನಿರ್ಧರಿಸಿ ಕಲಘಟಗಿಯ ಸೂರ್ಯವಂಶ ಕ್ಷತ್ರಿಯ ಹಿರಿಯರನ್ನು, ತರುಣರನ್ನು ವಿಚಾರಿಸಿ ಒಪ್ಪಿಗೆ ಪಡೆದರು. ಅವರೆಲ್ಲ ಇವರಿಗೆ ಧನ ಸಹಾಯವನ್ನು ನೀಡಿದರು. ಮುಂದೆ ಸಂಘ ಸ್ಥಾಪಿಸುವದಕ್ಕಾಗಿ ತಾಲೂಕಿನಲ್ಲೆಲ್ಲ ಅಲೆದಾಡಿದರು. ಜನರು ಇವರ ಅಭಿಮಾನ, ಕಳಕಳಿ, ಕೆಲಸಮಾಡುವ ಸಿಸ್ತುಗಳನ್ನು ಕಂಡು ಮರುಳಾಗಿ ಬೆಂಬಲಕ್ಕೆ ಸಿದ್ಧರಾದರು. ಆಗ ಮತ್ತೆ ಇವರಿಗೆ ಮಿಶ್ರಿಕೋಟಿಯ ಶ್ರೀ ಭೀಮಾಜಿ ಮಂಡಲಕರರು ಮತ್ತು ಮುತ್ತಗಿಯ ಬಸವಂಣೆಪ್ಪ ಮಿರ್ಜಕರ ಮತ್ತು ಇನ್ನೂ ಕೆಲಜನರು ಬಂದು ಕೂಡಿದರು. ಸಭೆಯಲ್ಲಿ ನಿಶ್ಚಯಿಸಿದ ದಿನ ಕಲಘಟಗಿಯಲ್ಲಿ ತಾಲೂಕಿನ ಕಲಾಲರೆಲ್ಲ ಕೂಡಿದರು ಸಭೆಯಲ್ಲಿ ಇತರ ಸಮಾಜಗಳ ಪ್ರೋತ್ಸಾಹದಿಂದ ಕಲಘಟಗಿ ತಾಲೂಕ ಸೂರ್ಯವಂಶ ಕ್ಷತ್ರಿಯ ಸಂಘಕ್ಕೆ ಪ್ರತಿಯಾಗಿ ಅಖಿಲ ಕರ್ನಾಟಕದ ಸೂರ್ಯವಂಶ ಕ್ಷತ್ರಿಯ ಸಂಘವು ಸ್ಥಾಪಿಸಲ್ಪಟ್ಟಿತು. ಇದಕ್ಕೆ ಕರ್ನಾಟಕದ ಎಲ್ಲ ಭಾಗಗಳಿಂದಲೂ ಪ್ರೋತ್ಸಾಹ ಸಿಕ್ಕು ಬೇಗನೆ ಅಖಿಲ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಮಹಾಸಭೆಯನ್ನು ಕೂಡಿಸಿರೆಂದು ಆಗ್ರಹದ ಬಿನ್ನಹ ಬಂದಿತು. ಅದಕ್ಕಾಗಿ ನಿಧಿ ಸಂಗ್ರಹಕ್ಕೆ ಕೆಲವು, ಪ್ರಚಾರಕ್ಕೆ ಕೆಲವು ಜನರು ಕರ್ನಾಟಕದ ತುಂಬಾ ಅಡ್ಡಾಡಿದರು. ನಿಧಿ ಕೂಡಿತು. ಜನತೆಯಲ್ಲಿ ಪ್ರಚಾರವೂ ಆಯಿತು. ಕೊನೆಗೆ ಕಲಘಟಗಿಯಲ್ಲಿ ಮೊದಲನೇ ಅಖಿಲ ಕರ್ನಾಟಕ ಸೂರ್ಯವಂಶ

ಕ್ಷತ್ರಿಯ ಮಹಾಸಭೆಯು ಮೆ॥ ಹಿರೇಮಠ ಕಲೆಕ್ಟರಸಾಹೇಬರ ಅಧ್ಯಕ್ಷತೆಯಲ್ಲಿ ೧೯೩೭ ನೇ ಇಸ್ವಿಯಲ್ಲಿ ಕೂಡಿತು. ಮಹಾಸಭೆಗೆ ಕರ್ನಾಟಕದ ಎಲ್ಲಕಡೆಯಿಂದಲೂ ಸೂ ಕ್ಷತ್ರಿಯರು ಕೂಡಿದ್ದರು. ಬೇರೆ ಸಮಾಜಗಳ ಮುಖಂಡರು ತಮ್ಮ ತಮ್ಮ ಸಂದೇಶಗಳನ್ನು ಕಳುಹಿಸ್ದರು ಎರಡುದಿನಗಳವರೆಗೆ ದೀರ್ಘಚರ್ಚೆಯಾಗಿ ಕ್ಷತ್ರಿಯರೆಲ್ಲರೂ ತಮ್ಮ ಮಕ್ಕಳಿಗೆ ವಿದ್ಯೆ ಕಲಿಸಬೇಕೆಂದು ಎಲ್ಲ ಭಾಗಗಳಲ್ಲಿಯೂ ತಾಲೂಕ, ಜಿಲ್ಲಾ ಸಂಘಗಳು ಸ್ಥಾಪಿಸಬೇಕೆಂದೂ ದಿನಚರಿಯಲ್ಲಿ ಸ್ವಚ್ಛತೆ, ಸ್ನಾನ, ದೇವರಪೂಜೆ ಮುಂತಾದ ಮನಸ್ಸಿಗೆ ಶಾಂತಿಯನ್ನು ಕೊಡುವ ಕರ್ಮಗಳನ್ನಾಚರಿಸಬೇಕೆಂದೂ ಕ್ಷತ್ರಿಯರು ಅಲ್ಪ ಸಂಖ್ಯಾಕರೂ ಹಿಂದುಳಿದವರೂ ಇರುವದರಿಂದ ಸರಕಾರವು ಈ ಸಮಾಜದಲ್ಲಿ ಕಲಿತ ಜನರಿಗೆ ನವಕರಿ ಕೊಡಬೇಕೆಂದು ಬೇಡಿಕೊಳ್ಳಬೇಕೆಂದೂ ಸಮಾಜ ಬಂಧುಗಳು ಮುಷ್ಟಿಫಂಡು, ಧನಸಹಾಯಗಳಿಂದ ಹಣಕೂಡಿಸಬೇಕೆಂದೂ ಇನ್ನೂ ಕೆಲವು ಠರಾವುಗಳೂ ಪಾಸಾದವು. ಅದೇ ಸಭೆಯಲ್ಲಿ ಗದಗದ (ಧಾರವಾಡ ಜಿ.) ಪರವಾಗಿ ಶಿರಹಟ್ಟಿ ದಿ. ಗೂಳಾಜಿ ಕಲಾಲ ಮತ್ತು ದಿ. ವಾಸುದೇವರಾವ್ ಕಲಾಲರವರು ಮುಂದಿನ ಮಹಾಸಭೆಯನ್ನು ಗದುಗಿನಲ್ಲಿ ಸೇರಿಸಬೇಕೆಂದು ಬೇಡಿಕೊಂಡರು. ಸಭೆಯಲ್ಲಿ ಶ್ರೀ ಹೀರಾಜಿ ಭಂಡಕರರವರು ಕಾರ್ಯಾಧ್ಯಕ್ಷರಾಗಿ ಶ್ರೀ ಮಿರಜಕರರವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ಮುಂದೆ ಒಂದು ವರ್ಷದ ವರೆಗೆ ಕರ್ನಾಟಕದ ತುಂಬಾ ಅಡ್ಡಾಡಿ ಪ್ರಚಾರ ಮಾಡಿ ನಿಧಿಸಂಗ್ರಹಮಾಡಿ ಸಂಘದ ಶಕ್ತಿಯನ್ನು ಬೆಳೆಸಿಕೊಂಡರು.

ನಿಶ್ಚಿತವಾದ ಮೇರೆಗೆ ಗದುಗಿನಲ್ಲಿ ಮೂರನೆಯ ವರ್ಷ ದ್ವಿತೀಯ ಸೂರ್ಯವಂಶ ಕ್ಷತ್ರಿಯ ಮಹಾಸಭೆಯು ದಾವಣಗೇರಿಯ ಶ್ರೀ ಹೆಚ್. ನಾಗೇಶರವರ ಹಿರಿತನದಲ್ಲಿ ಆರಂಭಿಸಲ್ಪಟ್ಟಿತು. ಪ್ರಚಾರದಿಂದಾಗಿ ಮೈಸೂರ ಬಳ್ಳಾರಿಗಳ ಕಡೆಯಿಂದ ಹೆಚ್ಚಾಗಿ ಜನ ಕೂಡಿದ್ದರು. ಕ. ಉತ್ತರಭಾಗದ ಸಂಸ್ಥಾನಗಳಲ್ಲಿ ವಾಸಿಸುವ ಘಾಟ ಕ್ಷತ್ರಿಯರೂ ಬಳ್ಳಾರಿಯ ಚಾಕಣಾ ಕ್ಷತ್ರಿಯರೂ ಬಂದಿದ್ದರು. ಆದರೆ ಪ್ರವೇಶ ದೊರೆಯದ್ದರಿಂದ ಮುಸ್ಲಿಂ ಕ್ಷತ್ರಿಯರು ಮಾತ್ರ ಬಂದಿರಲಿಲ್ಲ. ಪರಸ್ಪರ ಪರಿಚಯ ವಿಚಾರಗಳಿಂದಾಗಿ ಸಭೆಯಲ್ಲಿ ಅಪೂರ್ವವಾದ ಉತ್ಸಾಹವು ಉಕ್ಕುತ್ತಿತ್ತು. ಈ

ಸಾರೆ ಪಂಗಡಗಳ ಏಕೀಕರಣದ ಬಗ್ಗೆ ಘನವಾದ ಚರ್ಚೆನಡೆಯಿತು. ಬಳ್ಳಾರಿಕಡೆಯ ಚಾಕಣಾ ಕ್ಷತ್ರಿಯರು ತಮ್ಮನ್ನು ಸಮಾಜದಲ್ಲಿ ಕೂಡಿಸಿ ಕೊಳ್ಳಬೇಕೆಂದು ಠರಾವನ್ನು ಮಂಡಿಸಿದರು. ಅದರ ಬಗ್ಗೆ ವಾದವಿವಾದ ಗಳಾಗಿ ಬಲವಾದ ವಿರೋಧದಿಂದ ಠರಾವು ಬಿದ್ದುಹೋಯಿತು. ಉಜ್ವಲ ವಾದ ಭವಿತವ್ಯತೆಯ ಆಶೆಯಿಂದ ಕೂಡಿದ ಮಹಾಧಿವೇಶನವು ಗಂಭೀರ ವಾದ ಖಿನ್ನತೆ ತಾಳಿತು ಹಾಗೂ ಹೀಗೂ ಸಭೆನಡೆಯಿತು. ಎಷ್ಟೋ ಜನರ ಉತ್ಸಾಹಭಂಗವಾಯಿತು. ಮುಂದಿನ ಮಹಾಧಿವೇಶನಕ್ಕೆ ವಿಜಾ ಪೂರ ಜಿಲ್ಲೆಯ ಇಳಕಲ್ಲದವರು ಆಮಂತ್ರಣಕೊಟ್ಟರು.

ಹೀಗೆ ಸಂಘವು ಒಳ್ಳೇ ಉತ್ಸಾಹ ಹುಮ್ಮಸಗಳಿಂದ ಕಾರ್ಯಸಾಗಿ ಸಿರುವಾಗ ಮುಂದೆ ಭಯಂಕರವಾದ ಕೋಲಾಹಲವುಂಟಾಯಿತು. ಅಖಿ ಲಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘದ ಜನ್ಮದಾತೃಗಳೂ ಆಧಾ ರಸ್ತಂಭರೂ ಆದ ಶ್ರೀ ಗಂಗಾಜಿಯವರು ಅಕಾಲ ನಿಧನವಾದರು. ಇದ ರಿಂದಾಗಿ ಎಲ್ಲರಿಗೂ ಮಹಾದುಃಖ ಆವರಿಸಿರುವಾಗಲೇ ಮತ್ತೊಂಧು ಆಪತ್ತು ಸಂಘವನ್ನು ಮುತ್ತಿತು. ಅದೆಂದರೆ- ಮಹಾಸಂಘದ ಕಾರ್ಯಕರ್ತರೆಲ್ಲರೂ ಒಮ್ಮೆಲೇ ಔದ್ಯೋಗಿಕ ಅವನತಿಗೊಳಗಾಗಿ ಅಂದರೆ ಅಂಗಡಿಗಳ ಏರಾಟಕ್ಕೆ ಸಿಕ್ಕು ದಿವಾಳಿಯಾಗಿ ದಿಕ್ಕುಕಾಣದೆ ಅನಾಥರಾದರು. ಕಾರ್ಯಕುಶಲ ಗಂಗಾಜಿಯವರೊಡನೆ ಅವರ ಸಹೋದ್ಯೋಗಿಗಳ ಅವನತಿಯಾದುದರ ಪರಿಣಾಮವಾಗಿ ಮಹಾಸಂಘವು ಜೀವನ್ಮೃತಾವಸ್ಥೆಯಲ್ಲಿ ನಿಂತುಹೋಯಿ ತು. ಇಂದಿಗೂ ಅದು ಹಾಗೆಯೇ ಮಲಗಿರುವದು. ಮುಖ್ಯವಾಗಿ ಕ್ಷತ್ರಿ ಯಕುಲವೇ ದುರ್ದೈವಿಯಿರುವಾಗ ಯಾರೇನುಮಾಡಬೇಕು. ಅವರ ನಂತರ ಕಾರ್ಯಮಾಡುವ ವಿಚಾರವಂತರು ಮುಂದೆಬರಲಿಲ್ಲ. ಹಿರಿಯ ರಾದರೂ ತಮ್ಮ ಸ್ಥಿತಿ ಹೀಗಾಯಿತೆಂದು ಅದನ್ನು ಸಾಗಿಸುವ ಉತ್ಸಾಹ ವುಳ್ಳವರನ್ನು ಹುಡುಕಿ ಅವರಿಗೆ ಒಪ್ಪಿಸಲಿಲ್ಲ. ಹೀಗಾಗಿ ನಮ್ಮ ಪ್ರಗತಿ ಯು ಅಸೆಯಲ್ಲೇ ಉಳಿಯಿತು. ಈ ಪ್ರಕಾರ ಈ ಸಂಘದ ಕೆಲಸವು ನಿಂತು ಹೋದಕೂಡಲೇ ಎಲ್ಲರಿಗೂ ನಿರಾಶೆ ಆವರಿಸಿತು. ಆದರೂ ಕೆಲಜನರಲ್ಲಿ ಆಶೆಯ ಅಂಕುರವಿದ್ದೇಇತ್ತು. ಆದರೆ ಪರಿಸ್ಥಿತಿಯ ಅನಾನುಕೂಲತೆ ಯಿಂದಾಗಿ ಯಾರೂ ಮುಂದೆಬಾರದಾದರು. ಹಿಂದಿನ ಎರಡು ವರ್ಷದ

ಮಹಾಸಂಘದ ಪ್ರಚಾರದಿಂದ ಕೆಲವರು ತಮ್ಮ ಮಕ್ಕಳಿಗೆ ವಿದ್ಯೆಕಲಿಸುವ ಧೋರಣವನ್ನು ಕೈಕೊಂಡರು. ಹೀಗೆ ನಿರಾಶೆಯಲ್ಲಿ ಮುಳುಗಿರುವಾಗಲೇ ೧೯೩೭ ನೇ ಇಸ್ವಿಯಸುಮಾರಕ್ಕೆ ಹುಬ್ಬಳ್ಳಿಯ ಮುನಸಿಪಾಲಿಟಿಯವರಿಗೂ ಹುಬ್ಬಳ್ಳಿಯ ಕ್ಷತ್ರಿಯರಿಗೂ ತಿಕ್ಕಾಟವಾಯಿತು. ಅನ್ಯಾಯದಿಂದ ಮಾರ್ಕೆಟ್ಟಿನಹೊರಗೆ ಮುಚ್ಚುಮರೆಯಿಂದ ಅಂಗಡಿಗಳನ್ನು ಕ್ಷತ್ರಿಯರಮೇಲಿನ ವೈಯಕ್ತಿಕ ದ್ವೇಶ ತೀರಿಸುವ ಅಭಿಲಾಷೆಯಿಂದ ಕಂಟ್ರಾಕ್ಟಕೊಟ್ಟಿತ್ತು. ಅದು ಕಾಯದೆಗೆ ವಿರುದ್ಧವಾಗಿದ್ದುದರಿಂದ ಕ್ಷತ್ರಿಯ (ಕಲಾಲ) ರಿಗೆ ಹೆಚ್ಚಾಗಿ ಆರ್ಥಿಕ ಹಾನಿಯಾಗತೊಡಗಿತು. ಆದ್ದರಿಂದ ಹುಬ್ಬಳ್ಳಿಯ ಕ್ಷತ್ರಿಯರೆಲ್ಲ ದಿ. ಶ್ರೀ ಮಾಧವಜಿ ಮಂಡಲಕರರ ಹಿರಿತನದಲ್ಲಿ ಒಂದಾಗಿ ಶ್ರೀ ಡಾ. ಹರ್ಡಿಕರ ಮತ್ತು ಶ್ರೀ ಮುನವಳ್ಳಿ ವಕೀಲರ ಸಹಾಯದಿಂದಾಗಿ ಮುನಪಾಲಿಟಿಯ ವಿರುದ್ಧ ಸರಕಾರಕ್ಕೆ ದೂರಿಟ್ಟು ತಮಗಾದ ಅನ್ಯಾಯವನ್ನು ದೂರಮಾಡಿಕೊಂಡರು. ಮೊನ್ನೆ ೧೯೪೪ರಲ್ಲಿ ಶ್ರೀ ಆರ್. ವಾಯ್. ಕಲಾಲರ ಪರಿಶ್ರಮದಿಂದಾಗಿ ಎಲ್ಲರೂ ಸಂಘಟಿತರಾಗಿ ಸೂರ್ಯವಂಶ ಕ್ಷತ್ರಿಯ ಸಂಘ ಹುಬ್ಬಳ್ಳಿ ಎಂಬ ಸಂಘವನ್ನು ಸ್ಥಾಪಿಸಿ ಶ್ರೀ ಹೀರಾಜಿ ಕಲಾಲರವರು ಅಧ್ಯಕ್ಷರಾಗಿ ೧ ಶ್ರೀ ಮದಾರಜಿ ಮೋರೇಕರರು ೨ ಭರಮಾಜಿ ತೇಗೂರರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿದ್ದಾರೆ. ಎಲ್ಲರ ಸಹಾಯ ಸಹಕಾರಗಳಿಂದ ಆ ಸಂಘವು ಕೆಲಧಾರ್ಮಿಕ ರೂಢಿಗಳನ್ನು ಆದರ್ಶರೀತಿಯಲ್ಲಿ ಬದಲಾಯಿಸಿ ಧರ್ಮದ ಹೆಸರಿನಲ್ಲಿ ಹರಿದುಹೋಗುತ್ತಿದ್ದ ದುಡ್ಡಿನಹೊಳೆಗೆ ತಡೆಹಾಕಿದ್ದಾರೆ.

ಈ ಪ್ರಕಾರ ಹುಬ್ಬಳ್ಳಿಯಲ್ಲಿ ಆಶಾದಾಯಕ ಮಾರ್ಗದಲ್ಲಿ ಹೆಜ್ಜೆ ಇಕ್ಕುತ್ತ ಕ್ಷತ್ರಿಯರು ನಡೆದಿದ್ದರೆ ವಿಜಾಪುರಜಿಲ್ಲೆಯ ಬಾಗಲುಕೋಟೆಯಲ್ಲೂ ಈ ಕ್ಷತ್ರಿಯರು ಸಂಘಟಿತರಾಗಿ ಬಾಗಲಕೋಟೆ ತಾಲೂಕ ಸೂರ್ಯವಂಶ ಕ್ಷತ್ರಿಯ ಸಂಘವನ್ನು ಸ್ಥಾಪಿಸಿ ಮಾನವನ ಹೀನಾವಸ್ಥೆ ದುರಭಿಮಾನಗಳಿಗೆ ಅಜ್ಞಾನವೇ ಕಾರಣವೆಂದೂ ಅದನ್ನು ಹೋಗಲಾಡಿಸಿದಾಗಲೇ ನಮ್ಮ ಸಮಾಜ ಉದ್ಧಾರವೆಂದೂ ಅರಿತು ಬಾಗಲಕೋಟೆಯಲ್ಲಿ ಸೂ. ಕ್ಷತ್ರಿಯ ಬಾಲಕರ ಸಲುವಾಗಿ ಒಂದು ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿ ನಮ್ಮ ಸಮಾಜದ ಬಾಲಕರಿಗೆ ಶಿಕ್ಷಣಕೊಡಿಸುತ್ತಿದ್ದಾರೆ. ಅಲ್ಲದೆ ಇನ್ನೂ

ತಮ್ಮ ಕಾರ್ಯ ಕ್ಷೇತ್ರವನ್ನು ಬೆಳೆಯಿಸಿ ಸಮಾಜವನ್ನು ತೀವ್ರ ಸುಧಾರಿಸ ಬೇಕೆಂಬ ಪವಿತ್ರಭಾವನೆಯಿಂದ ಕಾರ್ಯಸಾಗಿಸಿದ್ದಾರೆ.

ಇದಲ್ಲದೆ ಸಿಗ್ಗಾಂವದಲ್ಲಿ [ ಧಾರವಾಡ ಜಿಲ್ಲಾ ] ಯೂ ೧೯೪೦ ರಲ್ಲಿ ಶ್ರೀ ಮಹದೇವ ಪರಶುರಾಮ ಮಿರಜಕರರ ನೇತೃತ್ವದಲ್ಲಿ ಒಂದು ಸೂರ್ಯ ವಂಶ ಕ್ಷತ್ರಿಯ ಸಂಘವು ಸ್ಥಾಪಿಸಲ್ಪಟ್ಟು ಶ್ರೀ. ಭೀಮಾಜಿ ಸಿದ್ಧಪ್ಪ ಟೋ ರ್ಪೇಕರರು ಅದರ ಸಂಚಾಲಕರಾಗಿದ್ದಾರೆ. ಅವರೂ ತಮ್ಮ ಸಮಾಜದ ಮಕ್ಕಳಿಗೆ ವಿದ್ಯೆಕಲ್ಲಿಸುವದು ಶುದ್ಧ ಸರಳ ಶಾಂತ ಜೀವನ ನಡೆಸಿಕೊಂಡು ಹೋಗಲು ಜನರಿಗೆ ಉಪದೇಶಿಸುವದು ಧರ್ಮದ ಹೆಸರಿನಲ್ಲಿ ವಂಚಕರುವಿ ನಾದರೂ ಅನ್ಯಾಯ ಮಾಡಿದರೆ ಅತ್ಯಂತ ನ್ಯಾಯದೃಷ್ಟಿಯಿಂದ ಪ್ರತಿಭಟಿ ಸುತ್ತಿದ್ದಾರೆ. ಸಂಘಕ್ಕಾಗಿ ಕೆಲ ಆಪದ್ಧನವನ್ನೂ ಕೂಡಿಸಿದ್ದಾರೆ. ಮತ್ತು ವಿಶಾಲವಾಗಿ ತಮ್ಮ ಕಾರ್ಯಕ್ಷೇತ್ರವನ್ನು ಹೊಸ ರೀತಿಯಲ್ಲಿ ಆರಂಭಿಸಬೇ ಕೆಂದು ಯೋಚಿಸಿದ್ದಾರೆ. ಈ ಪುಸ್ತಕದ ಮುದ್ರಣ ವೆಚ್ಚವನ್ನು ಈ ಸಂಘವೇ ಹೊತ್ತಿದೆ.

ಈ ಕ್ಷತ್ರಿಯರು ಉತ್ತರದಿಂದ ಇತ್ತ ಬಂದು; ವಾಸವಾಗಿ ನಾಲ್ಕೈ ದು ಶತಕಗಳಾದವು. ಇವರು ಯಾವದಾದರೊಂದು ಲೋಭದಿಂದ ಬಂದ ವರಲ್ಲವಾದರೂ, ಈ ಕಷ್ಟಪರಂಪರೆಯಿಂದಲೇ ಈ ಸಂತತಿಯು ನಿರಾಶೆ ಯುಳ್ಳದ್ದಾಗಿದೆ. ಎಲ್ಲ ಸಮಾಜಗಳೂ ಜಾಗೃತವಾಗಿ ಮುಂದುವರಿದರೂ ಇವರು ಇನ್ನೂ ಸಂಘಟಿತರಾಗದೆ ಹಿಂದುಳಿದಿದ್ದಾರೆ. ಆದರೂ ನಿರಾಶಗೆ ಅವಕಾಶವಿಲ್ಲ. ಅಲ್ಲಲ್ಲಿ ಸುಧಾಣೆಗಾಗಿ ಕೆಲಸಂಘಗಳೂ ಕೆಲತರುಣರೂ ಪ್ರಯತ್ನಿಸುತ್ತಿದ್ದಾರೆ. ಇಂದು ಅವರೆದುರಿಗೆ ಶಿಕ್ಷಣ, ಉದ್ಯೋಗ, ಧರ್ಮ ರಾಜಕಾರಣ ಮುಂತಾದ ಸಮಸ್ಯಗಳು ಮಹಾ ಪರ್ವತಗಳಂತೆ ನಿಶ್ಚಲವಾ ಗಿನಿಂತಿದೆ, ಕ್ಷತ್ರಿಯರ ಈ ಕರಣ ಕಥೆಯನ್ನು ನೋಡಿದರೆ ಅನ್ಯಾಯದ ದಾರಿಯಿಂದ ದೂರುಸಾಗುವರೆಂದು ಸ್ಪಷ್ಟವಾಗುತ್ತದೆ. ಎಷ್ಟು ಕಷ್ಟಪಟ್ಟ ರೂ ಕೀರ್ತಿಗಾಗಿ ಹಂಬಲಿಸುವವರಲ್ಲ. ಎಲೆಯುಮರೆಯ ಕಾಯಿಯಂತೆ ಹಿಂದೆ ಇದ್ದು ದುಡಿಯುವವರು ಕರ್ನಾಟಕದಲ್ಲಿ ಅನೇಕ ಸಮಾಜಗಳು ಅವೆ. ಅವುಗಳಲ್ಲಿ ಕೆಲವು ಅಲ್ಪ ಸಂಖ್ಯಾಕರರೆಂದು ಮುಂದುವರಿಯುತ್ತಿದ್ದರೆ

ಕೆಲವು ಹಿಂದುಳಿದವು ಎಂದು ಮುಂದೆ ಸಾಗಿವೆ. ಆದರೆ ಈ ಕ್ಷತ್ರಿಯರು ಹಿಂದುಳಿದವರೂ ಅಲ್ಪ ಸಂಖ್ಯಾಕರೂ ಆಗಿದ್ದಾರೆ. ಏನೇ ಆದರೂ ಇಂಥ· ವರು ಕನ್ನಡಮ್ಮನ ಮಕ್ಕಳಾಗಿದ್ದಾರೆ. ಅತ್ಯಂತ ದೀನರಾಗಿದ್ದಾರೆ. ಮುಂದು ವರಿದ ಬಹುಸಂಖ್ಯಾಕ ಸಮಾಜಗಳು ಸಹಾನುಭೂತಿಯ ದೃಷ್ಟಿಯಿಂದ ಕಂಡು ಕರುಣದೋರಿ ಕೈಹಿಡಿದು ಮುಂದೆ ಕರೆದುಕೊಂಡು ಸಾಗಬೇಕು. ಅಂದರೆ ಈ ಕ್ಷತ್ರಿಯರ ಈ ಕಲಾಲರ ಪ್ರಗತಿಗಾಗಿ ಆಶೆ. ಕನ್ನಡಮ್ಮನಿಗೆ ಸುಮಾರು ಇಪ್ಪತ್ತುಸಾವಿರ ಮುಗ್ಧ ನಿರ್ಮಲ ಮಕ್ಕಳಸೇವೆ.



# ಸಮಸ್ಯೆಗಳು

ನಾವು ನಮ್ಮ ಇತಿಹಾಸವನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರಿಸದರೆ ಒಂದು ಮಾತು ತಿಳಿಯುವದು. ಅದೆಂದರೆ- ನಾವು ಅನುಭವಿಸುತ್ತಿರುವ ಕಷ್ಟವು ನಮ್ಮ ಸಂಸ್ಕೃತಿ ಜೀವನಗಳ ಉದ್ಧಾರಕ್ಕಾಗಿ ಎಂಬದು ಇದೇ ನಮ್ಮ ಗುರಿ. ಈ ಗುರಿಯತ್ತಲೇ ನಾವು ಸಾಗಬೇಕಿತ್ತು. ಆದರೆ ಅದು ವಿಪರೀತವಾಗಿ ಗುರಿತಪ್ಪಿ ಬಾಳುತಪ್ಪಿಸಾಗಿದೆ. ಆದರೂ ನಾವು ಇಂದು ಅದಕ್ಕಾಗಿ ಯೋಚಿಸುತ್ತಿರುವೆವಲ್ಲ. ಅಂದಮೇಲೆ ಇನ್ನು ಮುಂದಾದರೂ ನಾವು ನಮ್ಮ ಉನ್ನತಿಯನ್ನು ಸಾಧಿಸಬಹುದು. ಆದಕಾರಣ ಇಂದು ವಿಚಾರಗಳ ಘರ್ಷಣೆಯಾಗಬೇಕು. ಆ ಘರ್ಷಣೆಯಿಂದ ಒಂದು ದಾರಿತೋರುವದು. ಅದರಿಂದ ನಮ್ಮ ಜೀವನದಲ್ಲಿ ತೊಡಕಿರುವ ದೋಷಗಳನ್ನು ಕಿತ್ತು ಬೀಸಾಕಿ ಸ್ವಾಭಿಮಾನಿ, ಸ್ವದೇಶಾಭಿಮಾನಿಗಳಾಗಿ ಬಾಳುವೆವು. ಇಂದು ಕಲಾಲರ ಬಾಳಿನ ಯಾವ ಮಗ್ಗುಲನ್ನು ನೋಡಿದರೂ ಅದು ದೋಷಪೂರ್ಣವಾಗಿದೆ. ಆದ್ದರಿಂದ ಅವರೆಲ್ಲ ಒಂದಾಗಿ ಇಂದು ತಮ್ಮ ದೋಷಗಳಾವವು. ಎಂಬುದನ್ನರಿತು ಅದನ್ನು ಇಲ್ಲದಂತಾಗಿರಿಸಲು ಪ್ರಯತ್ನಿಸಬೇಕು. ಸಾಮಾನ್ಯ ದೃಷ್ಟಿಯಿಂದ ನೋಡಲು ನಮ್ಮ ಶಿಕ್ಷಣ, ಉದ್ಯೋಗ, ಧರ್ಮ ರಾಜಕಾರಣ ಈ ಭಾಗಗಳನ್ನು ನಾವು ಪುನರುಜ್ಜೀವಿಸಬೇಕಾಗಿದೆ. ಎಂಬುದು ತಿಳಿಯುವದು. ಅದಕ್ಕಾಗಿ ಈ ವಿಷಯಗಳನ್ನು ಕುರಿತು ಆಲೊಚಿಸುವಾ.

ಶಿಕ್ಷಣ ವಿದ್ಯೆಯಿಲ್ಲದಬಾಳು ಹದ್ದಿಗಿಂತಲೂಕೀಳು. ಎಂದು ಮಹಾಕವಿ ಸರ್ವಜ್ಞನು ಪಂಡಿತನಿಂದ ಪಾಮರನವರೆಗೂ ಸಹಜ ಗೊತ್ತಾಗು

ವಂತೆ ಹಾಡಿದ್ದಾನೆ. ಅಂತೆಯೇ ಇಂದು ಭಾರತವು ಎಚ್ಚತ್ತು ಶಿಕ್ಷಣ ವಿಷಯದಲ್ಲಿ ತನ್ನ ಹಿಂದುಳಿಯುವಿಕೆಯಿಂದ ಮುಂದೆ ಸಾಗಲು ಹಾತೊರೆದು ಪ್ರಯತ್ನಿಸುತ್ತಲಿದೆ. ಭಾರತದಲ್ಲಿ ಓದು ಬರಹ ಬಲ್ಲವರು ನೂರಕ್ಕೆ ಹತ್ತುಜನರಂತೆ ಮಾತ್ರ ಇದ್ದಾರೆ. ಆದರೆ ಈ ಕಲಾಲರಲ್ಲಿ ಇಂದು ಓದು ಬರಹ ಬಲ್ಲವರು ನೂರಕ್ಕೆ ಒಬ್ಬರಾದರೂ ದೊರೆಯುತ್ತಾರೋ ಇಲ್ಲವೋ ಸಂಶಯಾಸ್ಪದ ಶಿಕ್ಷಣವು ಮಾನವನಿಗೆ ಜೀವನದಲ್ಲಿ ಉಸಿರು ಇದ್ದಂತೆ ಇಂಥ ದೀನವಾದ ಪರಿಸ್ಥಿತಿಯಿಂದ ಕಲಾಲರು ಪಾರಾಗಬೇಕಾದರೆ ಇಂದು ಅವರಿಗೆ ಶಿಕ್ಷಣ ದೊರೆಯಬೇಕಾದುದು ಅವಶ್ಯವಾಗಿದೆ. ಆದ್ದರಿಂದಲೇ ಕಲಘಟಗಿಯ ಮಹಾಸಭೆಯಲ್ಲಿ ಕಲಾಲರೆಲ್ಲರೂ ತಮ್ಮ ಮಕ್ಕಳಿಗೆ ಶಾಲೆ ಕಲಿಸಬೇಕು ಎಂದು ನಿಶ್ಚಯವಾಯಿತು. ಇಂದು ಈ ಕಾರ್ಯದಲ್ಲಿ ನಾವು ಸಂಪೂರ್ಣ ಯಶಸ್ವಿಗಳಾಗಬೇಕಾದರೆ ಒಂದು ಕೇಂದ್ರ ಸಂಸ್ಥೆಯ ಮುಖಾಂತರ ಹಣಕೂಡಿಸಿ ಕಲಾಲ ವಿದ್ಯಾರ್ಥಿಗಳಿಗೆ ಮಾಧ್ಯಮಿಕ ಹಾಗೂ ಉಚ್ಚ ಮತ್ತು ಔದ್ಯೋಗಿಕ ಶಿಕ್ಷಣ ಕೊಡುವದಕ್ಕೆ ಅನುಕೂಲವಾಗುವಂತೆ ಊಟ ವಸತಿಗೃಹಗಳ ಏರ್ಪಾಡುಮಾಡಬೇಕು. ಮತ್ತು ಸರಕಾರಕ್ಕೆ ಆಗ್ರಹದಿಂದ ಬಿನ್ನವಿಸಿ ಕಲಾಲರ ಮೇಲೆ ಒತ್ತಾಯದ ಶಿಕ್ಷಣ ಪದ್ಧತಿಯನ್ನು ಜಾರಿಯಲ್ಲಿ ತರುವಂತೆ ಮಾಡಬೇಕು. ಹೀಗೆ ನಾವು ಶಿಕ್ಷಣ ವಿಷಯದಲ್ಲಿ ಆಸ್ಥೆವಹಿಸಿ ಕೆಲಸ ಮಾಡಿದರೆ ಕಲಾಲ ವಿದ್ಯಾರ್ಥಿಗಳ ಪೀಳಿಗೆಯ ಸಮಾಜದ ಉದ್ಧಾರದ ಉದಯವಾಗುವದು. ಈ ಕಾರ್ಯಕ್ಕೆ ಅಖಿಲ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘ ಮುಂದಾಗಬೇಕು.

**ಉದ್ಯೋಗ:—**

ಪ್ರತಿಯೊಬ್ಬ ಮನುಷ್ಯನಿಗೂ ಅಷ್ಟೇ ಏಕೆ ಈ ಜಗತ್ತಿನಲ್ಲಿಯ ಪ್ರತಿಯೊಂದು ಜೀವಿಗೂ ಬಾಳಿ ಬದುಕಬೇಕಾದರೆ ಅದಕ್ಕೆ ಆಹಾರವು ಅವಶ್ಯವಾಗಿ ಬೇಕು. ಅದನ್ನು ದೊರಕಿಸಿಯೇ ಅದು ಜೀವಧಾರಣಮಾಡುತ್ತದೆ. ಈ ಜಗದರಂಗದಲ್ಲಿ ಮಾನವನು ಪ್ರಾಣಿಗಳಲ್ಲೆಲ್ಲ ಮೇಲುಮಟ್ಟಿನವನಾಗಿದ್ದಾನೆ. ಹಿಂದಿನ ಅನುಭವಗಳ ನೆರವಿನಿಂದ ಮುಂದೆ ಜೀವನಸಾಗಿಸುತ್ತಾನೆ. ಎಲ್ಲಕ್ಕೂ ಮೊದಲು ಕಾಡು ಸ್ಥಿತಿಯಲ್ಲಿದ್ದಾಗ ಬೇಟೆಯಾಟದಿಂದ ಜೀವಧಾರಣ ಮಾಡುತ್ತಿದ್ದನು. ಮುಂದೆ ನಿಸರ್ಗದಲ್ಲಿಯ ಫಲಗಳನ್ನು ತಿಂದು ಬೇಟೆ

ಯನ್ನು ತ್ಯಜಿಸಿದನು. ಹಾಗೆ ಮುಂದೆ ಫಲಗಳಿಂದ ತನ್ನ ಅನುಭವಗಳನ್ನು ಮುಂದೆ ಚಾಚುತ್ತ ಧಾನ್ಯಗಳನ್ನು ಗುರುತಿಸಿ ಒಕ್ಕಲುತನವನ್ನು ಪ್ರಾರಂಭಿಸಿದನು. ಅಂದಿನಿಂದಲೇ ಜಗತ್ತಿನಲ್ಲಿ ಒಕ್ಕಲುತನವು ಆರಂಭವಾಗಿದೆ ಮುಂದೆ ಬರಬರುತ್ತ ತನ್ನ ಸಂಸ್ಕೃತಿಯು ಹೆಗ್ಗಳಿಕೆಯಿಂದ ತನ್ನ ಜೀವನವನ್ನು ವಿವಿಧಾಂಗಗಳ ಕಡೆಗೆ ಹರಿಸುತ್ತ ಸಮಾಜದಲ್ಲಿ ಬೇರೆ ಬೇರೆ ಭಾಗಗಳನ್ನು ರಚಿಸಿದನು ಆದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ನಾಲ್ಕು ಜಾತಿಗಳು ಔದ್ಯೋಗಿಕ ದೃಷ್ಟಿಯಿಂದ ರಚಿಸಲ್ಪಟ್ಟವು. ಬ್ರಾಹ್ಮಣನು ಜಗತ್ತಿನಲ್ಲಿ ಧರ್ಮ, ನೀತಿ, ತತ್ವಗಳನ್ನು ಪ್ರಚಾರ ಮಾಡುತ್ತ ಜನತೆಯನ್ನು ಸನ್ಮಾರ್ಗದಲ್ಲಿ ಸಾಗಿಸಬೇಕೆಂದು ಕ್ಷತ್ರಿಯರು ದೇಶದ ಸಂಪತ್ತಿನ ರಕ್ಷಣೆಮಾಡಿ ಶಾಂತತೆ ಸುವ್ಯಸ್ಥೆಗಳನ್ನೂ ನೆಲೆಗೊಳಿಸಬೇಕೆಂದು ವೈಶ್ಯನು ಒಕ್ಕಲತನ ವ್ಯಾಪಾರ ಕೈಗಾರಿಕೆ ಮುಂತಾದವುಗಳಿಂದ ದೇಶದ ಸಂಪತ್ತನ್ನು ಹೆಚ್ಚಿಸಬೇಕೆಂದು ಶೂದ್ರನು ಇವರೆಲ್ಲರ ಸೇವೆಮಾಡುತ್ತ ಅವರನ್ನು ಸಹಾಯ ಮಾಡಬೇಕೆಂದು ಜಾತಿ ಪದ್ಧತಿಗಳ ನಿರ್ಮಾಣವಾಯಿತು. ಅಂದು ಬ್ರಾಹ್ಮಣ ಕುಮಾರನೇ ಇರಲಿ, ಶೂದ್ರನ ಮಗನೇ ಇರಲಿ, ಆತನು ಮಾಡುವ ಉದ್ಯೋಗದಮೇಲೆ ಆತನ ಜಾತಿಯ ನಿರ್ಣಯಿಸುತ್ತಿತ್ತು. ಆದರೆ ದುರ್ದೈವದಿಂದ ಆ ಪದ್ಧತಿಯು ನಾಶವಾಗಿ ಪರಂಪರಾವೃತ್ತಿ ಆರಂಭವಾಯಿತು, ಒಲವು, ಮಾನವ ಜೀವನದ ದಾರಿ ತೋರುವ ದೀಪವಾಗಿದ್ದರೆ ಅದುಹೋಗಿ ಜಾತಿಯೇ ಜೀವನದೂಡುವ ದಾರಿಯಾಯಿತು. ಅಂದಿನಿಂದ ಅವನಲ್ಲಿ ಅನ್ಯವನ್ನೆ ತೋರಿ ತನ್ನ ಜೀವನದ ಅತ್ಯುನ್ನತತತ್ವವನ್ನು ಪಡೆಯುವದಕ್ಕೆ ಪ್ರತಿಯಾಗಿ ಜೀವನಕ್ಕಾಗಿ ಮಾರ್ಗ ಹುಡುಕಬೇಕಾಯಿತು. ಅನೇಕ ಪರಸ್ಪರ ವಿರುದ್ಧ ಕಾರ್ಯಗಳಿಂದ ಮಾನವನು ಸೋತು ಪರಿಸ್ಥಿತಿಗೆ ಮಾರುಹೋದನು. ಅಂದಿನಿಂದಲೇ ಅವನು ತನ್ನ ಮಟ್ಟವನ್ನು ಇಳಿಸಿಕೊಂಡನೆನ್ನಬಹುದು. ಈ ಕ್ಷತ್ರಿಯರು ತಮ್ಮ ಕರ್ತವ್ಯವನ್ನು ಮರೆತು ತಮ್ಮ ಒಲವಿಗೆ ವಿರುದ್ಧವಾದ ಉದ್ಯಮವನ್ನು ಎಂದು ಕೈಕೊಂಡರೋ ಅಂದಿನಿಂದ ಬಲು ಬಡವರಾದರು, ಹೀನಾವಸ್ಥೆಗೆ ಇಳಿದರು. ಎಲ್ಲಿಯವರೆಗೆ ಈ ಸಮಾಜವು ಈಗ ಕೈಕೊಂಡಿರುವ ಉದ್ಯೋಗಗಳಿಂದ ವಿಮುಖರಾಗಲಾರರೋ ಅಲ್ಲಿಯವರೆಗೆ ಈ ಸಂತತಿಗೆ ಸುಖಿಸಿಗಲಾರದು. ಈ ವ್ಯವಸಾಯದಲ್ಲಿಯೇ ಉನ್ನತಿಯನ್ನು ಬಯ

ಸುತ್ತಿದ್ದರೆ ಅದು ಬಿಸಿಲ್ಗುದುರೆಯನ್ನು ಬೆನ್ನಟ್ಟಿದಂತೆಯೇ ಇಂದು ಈ ಮಾತು ನಮ್ಮ ಸಮಾಜದ ಹಳಬರಿಗೆ ನಿಷ್ಠುರವಾಗಿ ತೋರಬಹುದಾದರೂ ಅದು ನಿಷ್ಠುರವಿರದಷ್ಟು ಸ್ಪಷ್ಟವಾದ ಸತ್ಯವಿದೆ. ಇಂದಿಲ್ಲ ನಾಳೆ ಭಾರತಕ್ಕೆ ಭಾಗ್ಯಕಾಲಬರುವದು ನಿಶ್ಚಿತ ಅಂದಾದರೂ ಇವರು ಈ ಉದ್ಯಮಗಳಿಂದ ಬಲಾತ್ಕಾರದಿಂದಲಾದರೂ ನಿವೃತ್ತರಾಗಬೇಕು. ಯಾಕಂದರೆ ನಮ್ಮ ನಾಡಿನ ಭಾವೀ ಭಾಗ್ಯವಿಧಾತರು ಮಧ್ಯಪಾನದಿಂದ ಉಂಟಾಗುವ ಬಡತನ ದುಃಖಗಳನ್ನೂ ಮಾಂಸಹಾರದಿಂದಾಗುವ ತಾಮಸೀ ವೃತ್ತಿಯನ್ನೂ ಅದರಿಂದಾಗುವ ಮಹಾ ಅನಾಹುತಗಳನ್ನೂ ನಿರ್ಮೂಲಮಾಡಲಿಕ್ಕೆ ಸದಾ ಸಿದ್ಧರಾಗಿದ್ದಾರೆ. ಇದನ್ನರಿತೇ ನಮ್ಮ ಸಮಾಜದ ಕೆಲ ಕಲಿತ ತರುಣರು ಈ ವ್ಯವಸಾಯಗಳಿಗೆ ಶರಣುಹೊಡೆದು ತಮಗೆ ಉಚಿತವಾದ ವ್ಯವಸಾಯಗಳನ್ನು ಆರಂಭಿಸಿದ್ದಾರೆ. ಹಿಂದಿನ ಹಿರಿಯರಿಗೆ ಈ ಉದ್ಯೋಗಗಳು ಮೈಯುಂಡಿವೆ. ಆದರಿಂದ ಅವರು ವಿಮುಖರಾಗಲಾರರು. ಹಾಗೆ ಅವರಿಗೆ ಒತ್ತಾಯಪಡಿಸಿದರೂ ಪ್ರಯೋಜನವಾಗುವದು ಕಡಿಮೆ. ಹಿಂದಿನವರು ತಾವು ಯಾವ ಉದ್ಯೋಗವನ್ನು ಮಾಡುವರೋ ಅದನ್ನೆ ತಮ್ಮ ಮಕ್ಕಳಿಗೆ ಮಾಡಿರೆಂದು ಒತ್ತಾಯಪಡಿಸದೆ ಅವರಿಗೆ ಯೋಗ್ಯ ಶಿಕ್ಷಣ ಕೊಟ್ಟು ಸ್ವತಂತ್ರವಾಗಿ ಅವರ ಬೇರೆ ಉದ್ಯೋಗ ಕೈಕೊಳ್ಳಲಿಕ್ಕೆ ದಾರೀಮಾಡಿಕೊಡಬೇಕು. ಈ ಮಾರ್ಗದ ಫಲವಾಗಿ ಇಂದು ನಮ್ಮ ಕೆಲ ತರುಣರು ಕಿರಾಣಿ ಅರಿವೆ, ಎಣ್ಣೆ, ಕಂಬಳಿಗಳ ವ್ಯಾಪಾರಮಾಡುತ್ತ, ಕೆಲಜನ ಶ್ರೀಮಂತರು ರಾಯಿಸ್‌ಮಿಲ್‌ಗಳನ್ನು ನಡೆಸುತ್ತ .ಕೆಲಜನ ಒಕ್ಕಲುತನ ಮಾಡುತ್ತ ಕೆಲವರು ಆರ್ಟಿಸ್ಟರಾಗಿ ಕೆಲವರು ನವಕರಿಯಿಂದ ಜೀವಿಸುತ್ತಿದ್ದಾರೆ. ಅದಕ್ಕಾಗಿ ನಮ್ಮ ಉದ್ಯೋಗದಲ್ಲಿ ನಾವು ಪ್ರಗತಿಯಾಗಬೇಕಾದರೆ ಕಲಾಲರು ಅಬಕಾರಿ ಕಂಟ್ರಾಕ್ಟ ಮಾಡುವದನ್ನು ಬಿಟ್ಟು ತಮ್ಮ ಮಕ್ಕಳಿಗೆ ಬೇರೆ ಬೇರೆ ಉದ್ಯೋಗಗಳನ್ನು ಮಾಡಹಚ್ಚುವದೊಳಿತು ಅಂದರೆ ನಾವು ಈ ವ್ಯಾಪಾರದಿಂದ ಪಾರಾಗಿ ದೇವರಿಗೆ ಪ್ರೇಮವುಳ್ಳವರಾಗುವೆವಲ್ಲದೆ ಜಗದ ಬಾಳಿನಲ್ಲಿಯೂ ಬೆಳಗುವೆವು. ಇನ್ನು ಮಾಂಸ ವಿಕ್ರಿಮಾಡುವ ಜನರು ಬಹುಜನ ಬಡವರೇ ಆಗಿದ್ದಾರೆ. ಅವರು ಈ ಉದ್ಯಮವನ್ನು ಬಿಟ್ಟು ಬೇರೆ ಉದ್ಯಮಕೈಕೊಳ್ಳುವಷ್ಟು ಭಾಂಡವಲುಗಾರಿಕೆ ಇಲ್ಲ. ಅವರಾವ ಉದ್ಯೋಗ ಮಾಡಬೇಕು. ಅದಕ್ಕೆ ಧನವನ್ನೊದಗಿಸುವವರಾರು. ಎಂಬ ಪ್ರಶ್ನೆ

ಮುಂದೆ ಬರುವದು. ಅದರ ಪರಿಹಾರಕ್ಕೆ ಮುಂದಿನ ಪ್ರಕರಣದಲ್ಲಿ ವಿಚಾರಿಸೋಣ. ಆದರೆ ಇಂದು ನಮ್ಮ ದೇಶವು ಪಾರತಂತ್ರ್ಯದಲ್ಲಿರುವದರಿಂದ ನಮ್ಮ ಉದ್ಯೋಗಗಳಿಗೆ ಸಾಕಷ್ಟು ಲಾಭವಿಲ್ಲದೆ ಬಡತನಭೂತಕ್ಕೆ ಬಲಿಯಾಗಿದ್ದೇವೆ. ಈ ಭೂತದಿಂದ ಬಿಡುಗಡೆಯಾಗಲು ಒಂದು ಮಂತ್ರವಿದೆ, ಅದು ಮಹಾಮಂತ್ರ. ಜಗತ್ತಿನ ಅದ್ವಿತೀಯ ವಿಭೂತಿ ಮಹಾತ್ಮಾಗಾಂಧೀಜಿಯ ಸತ್ಯಮಂತ್ರ. ಅಂದರೆ ನಮ್ಮ ನಾಡಿನ ಅಕ್ಕತಂಗಿಯರು ರಾಟಿಯ ಸುಸ್ವರದಲ್ಲಿ ಸುಂದರವಾಗಿ ಹಾಡಬೇಕು. ಹೀಗೆಂದರೆ– ನಮ್ಮ ಸ್ತ್ರೀಯರು ಮನೆಯಲ್ಲಿ ರಾಟಿಯಿಂದ ನೂಲುತೆಗೆಯಬೇಕು. ಕಲಾಲರು ಎಷ್ಟೇ ಬಡಜನರಿದ್ದರೂ ಅವರ ಸ್ತ್ರೀಯರು ಮನೆಗೆಲಸಗಳನ್ನಲ್ಲದೆ ಕಷ್ಟಕರವಾದ ಬೇರೆ ಯಾವಹೋರೆಯನ್ನು ಮಾಡದೆ ಸುಮ್ಮನೆ ಕಾಲಕಳೆಯುವರು. ಇಂದ್ಯ ನಮ್ಮ ಬಡತನವು ನೀಗಬೇಕಾದರೆ ನಮಗೆ ನಮ್ಮ ಸ್ತ್ರೀಯರ ಸಹಾಯವು ಅವಶ್ಯವಾಗಿಬೇಕು. ಅವರು ನಿರುದ್ಯೋಗಿಗಳಾಗಿ ಕಾಲಕಳೆಯುವದಕ್ಕೆ ಪ್ರತಿಯಾಗಿ ಮನೆಯಲ್ಲಿ ರಾಟಿಯಿಂಡ ನೂಲುತೆಗೆಯಬೇಕು. ಸ್ತ್ರೀಯರು ಸಮಾಜದ ತಾಯಿಯರು. ಹಾಗೂ ಸ್ಫೂರ್ತಿದೇವತೆಯರು ಕೂಸುಹಸಿದಾಗ ತಾಯ್ಯಿ ಹಾಲುಣಿಸುವದಿಲ್ಲವೇ. ಹಾಗೆ ಮಾಂಸವಿಕ್ರಿಯವನ್ನು ಬಿಟ್ಟು ಔದ್ಯೋಗಿಕ ಅವನತಿಗೆ ಈಡಾಗಬೇಕೇ ಎಂದು ಅಳುಮೋರೆಮಾಡುವ ನಮಗೆ ಸ್ತ್ರೀಯರು ಪೂರಕ ಉದ್ಯೋಗವನ್ನಾರಂಭಿಸಿ ಸಂತವಿಸಿ ಪುರುಷರು ಹೊಸ ಹಾದಿ ಹುಡುಕಲು ಧೈರ್ಯಕೊಡಬೇಕು. ಹೀಗೆ ಮಾಡಿದರೇನೆ ನಮ್ಮ ಅಧೈರ್ಯವು ಅಳಿದು ಹೊಸ ಹಾದಿಹುಡುಕಲು ಮಾರ್ಗಸಿಗುವದು.

**ಧರ್ಮ:—**

ಜೀವನಕ್ಕೆ ಒಂದು ಪೂರ್ಣತೆಯನ್ನು ಪಡೆಯುವದಕ್ಕಾಗಿ ಧರ್ಮಸಂಸ್ಥೆಯ ನಿರ್ಮಾಣವಾಗಿದೆ. ಸಾಕಷ್ಟು ಶಿಕ್ಷಣ ಪಡೆದು ಯೋಗ್ಯಉದ್ಯೋಗಗಳಿಂದ ಜೀವನ ನಡೆಯುಸುತ್ತ ಹೆಂಡಿರುಮಕ್ಕಳೊಡನೆ ಸುಖವಾಗಿ ಬಾಳವದಷ್ಟೇ ಜೀವನದಧ್ಯೇಯವಲ್ಲ. ಬಾಳಿನಲ್ಲಿ ಬೆಳಕನ್ನು ಕಾಣುವದು ಪಡೆಯುವದು ಮಾನವನ ಹಿರಿದಾದ ಧ್ಯೇಯವಾಗಿದೆ ಈ ಧ್ಯೇಯಸಾಧನೆಗಾಗಿಯೇ ಆತನು ಧರ್ಮಸಂಸ್ಥೆಯನ್ನು ಸ್ಥಾಪಿಸಿದ್ದಾನೆ. ಈ ಸಂಸ್ಥೆಯ ಕಟ್ಟಳೆಗಳಂತೆ ನಡೆಯುವದೇ ಮನುಷ್ಯನ ಅತ್ಯುಚ್ಚಕರ್ತವ್ಯ. ಅದಕ್ಕಾಗಿ

ಯೇ ಈ ಪವಿತ್ರಕಾರ್ಯದಲ್ಲಿ ಸಹಾಯ ಸಲ್ಲಿಸುವದಕ್ಕಾಗಿ ದೇವರು ಕಾಲ ಕಾಲಕ್ಕೆ ಅವತಾರಗಳನ್ನು ಮಾಡಿ ಧರ್ಮದ ದಿವ್ಯ ಸಂದೇಶವನ್ನು ಬೀರುತ್ತಿದ್ದಾನೆ. ಧರ್ಮವು ಒಂದೇಯಾಗಿದ್ದರೂ ಪರಿಸ್ಥಿತಿಗೆ ತಕ್ಕಂತೆ ಕಾಲಕಾಲಕ್ಕೆ ಬೇರೆಬೇರೆ ರೂಪ ಧರಿಸುತ್ತದೆ. ಹೀಗಾದರೇನೇ ಜನತೆಗೆ ಸುಖ ಸಿಗುವದು. ಆದರೆ ಇಂದಿನ ನಮ್ಮ ಧಾರ್ಮಿಕ ಜೀವನವನ್ನು ಸೂಕ್ಷ್ಮ ನೋಟದಿಂದ ನೋಡಿದರೆ ಇಂದು ನಮ್ಮ ಧರ್ಮವು ಅವಶ್ಯವಾಗಿ ಬೇರೆ ರೂಪಧಾರಣಮಾಡಬೇಕಾಗಿದೆ. ಹಾಗೆ ಮಾಡದೆ ಗತಿಯಿಲ್ಲ. ಯಾಕಂದರೆ- ಹಿಂದಿನಕಾಲಕ್ಕೆ ಕ್ಷತ್ರಿಯರಿಗೆ ಬ್ರಾಹ್ಮಣರೇ ಧರ್ಮದರ್ಶಕರಾಗಿದ್ದರು. ಅವನು ಹೇಗೆನಡೆಯಬೇಕೆಂಬುದನ್ನು ಬೋಧಿಸಿ ಅದರಂತೆ ನಡೆಯಹಚ್ಚುತ್ತಿದ್ದರು ಈ ಪದ್ಧತಿಯು ಪುರಾಣಕಾಲದಿಂದಲೂ ನಡೆಯುತ್ತ ಬಂದಿತ್ತು. ಅದು ಎಂದಿನವರೆಗೆ ಸಾಗಿತೆಂದರೆ ಸ್ವಾರ್ಥಕ್ಕಾಗಿ ಧರ್ಮಪ್ರಯೋಗ ನಡೆದು ವರ್ಣಾಶ್ರಮ ಧರ್ಮಕ್ಕೆ ಕೊಡಲಿ ಏಟು ಬೀಳುವವರೆಗೆ ಮಾತ್ರ ಅಂದಿನಿಂದ ಕೇವಲ ದಕ್ಷಿಣಾರೂಪವಾಗಿ ಶಿಗುವ ಆದಾಯಕ್ಕಾಗಿ ಮಾತ್ರ ಇವರು ದರ್ಶಕರಾದರು.. ಆದರೆ ಮುಂದೆ ಕೆಲಕಾಲದ ನಂತರ ಆ ಪರಿಸ್ಥಿತಿಯೂ ಉಳಿಯಲಿಲ್ಲ. ಕ್ಷತ್ರಿಯರು ಕಟುಕತನ ಕೈಕೊಂಡಮೇಲೆ ಬ್ರಾಹ್ಮಣರು ಇವರ ಸಮೀಪಕ್ಕೆ ಕೂಡ ಬಾರದಾದರು. ಅಂದಿನಿಂದ ನಮ್ಮ ಧರ್ಮವೆಂದರೆ ಮಂಗನಮುಲ್ಲಿನಾಥತನದಂತೆ ತನ್ನ ಮನಸ್ಸಿಗೆ ಬಂದಂತೆ ಸಾಗುತ್ತದೆ. ಜ್ಞಾನವಿಲ್ಲ. ಜ್ಞಾನದಾತ್ಮಗಳೂ ಇಲ್ಲ. ಧರ್ಮಬೆಳಿಯದಿದ್ದರೂ ಬಿಡಲಾರದೆ ಹಾಗೆ ಪರಿಸ್ಥಿತಿಯ ದಾಸನಾಗಿದ್ದಾನೆ ಈ ಪ್ರಕಾರ ಸಾಗಿದ್ದಕ್ಕೆ ನಾವು ಇಂದು ನಗೆಗೇಡಾಗಿದ್ದೇವೆ. ಆದ್ದರಿಂದ ನಾವು ಇಂದು ಪರಾವಲಂಬಿಗಳಾಗದೆ ಧರ್ಮ ಸಂಸ್ಥೆಯ ಪುನರ್ಘಟನೆಯನ್ನು ಆರಂಭಿಸಬೇಕಾಗಿದೆ, ಎಲ್ಲಿಯವರೆಗೆ ನಾವು ನಮ್ಮ ಕಾಲಮೇಲೆ ನಿಲ್ಲುವದಿಲ್ಲವೋ ಅಲ್ಲಿಯವರೆಗೆ ನಮಗೆ ಉನ್ನತಿಇಲ್ಲ. ಈ ಹೊಣೆಯು ನಮ್ಮ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘದ ಮೇಲೆಯೇ ಇದೆ. ಅದು ಹೇಗೆ ಮುಂದೆ ಸಾಗಬೇಕೆಂಬುದನ್ನು ಮುಂದಿನ ಪ್ರಕರಣದಲ್ಲಿ ವಿವರಿಸುವೆವು. ಇನ್ನು ಧರ್ಮದಬಂದಂಗವಾದ ವಿವಾಹದ ಬಗ್ಗೆ ಸ್ವಲ್ಪ ವಿಚಾರಿಸುವಾ:—

ವಿವಾಹದ ಗುರಿ ಏನೇ ಇರಲಿ. ಪ್ರತಿಯೊಬ್ಬನೂ ತನ್ನ ಹೊಟ್ಟೆಯ

ಪ್ರಶ್ನೆಯ ನಂತರ ಸಹಜವಾಗಿ ಇತ್ತ ಲಕ್ಷ್ಯಹಾಕುತ್ತಾನೆ. ಅದು ನಿಸರ್ಗ ನಿಯಮವೇ ಆಗಿದೆ ಒಂದಿನಕಾಲಕ್ಕೆ ಬೇಟೆಯಾಡಿ ಹೊಟ್ಟೆತುಂಬಿಸಿಕೊಳ್ಳುತ್ತಿದ್ದಂತೆ ತನ್ನ ಕಾಮಸಂತೃಪ್ತಿಗಾಗಿ ಸ್ತ್ರೀಯ ಬೇಟೆಂ ಮಾಡುತ್ತಿದ್ದನು ಆದರೆ ಬರಿಯಬೇಟೆಗಾಗಿಯಷ್ಟೇ ಮಾನವನಿಗೆ ಸ್ತ್ರೀಯ ಅವಶ್ಯಕತೆಇರಲಿಲ್ಲ. ಅವಳ ಉಪಯೋಗವು ಇದಕ್ಕೂ ಹೆಚ್ಚಾಗಿದ್ದಿತು ಅದಕ್ಕಾಗಿ ತನ್ನ ಬುದ್ಧಿ ಬಲದಿಂದ ವಿವಾಹ ಸಂಸ್ಥೆಯನ್ನು ಬೆಳಕಿನಲ್ಲಿ ತಂದಿದ್ದಾನೆ ಇರಲಿ, ಇದೀಗ ನಾವು ನಮ್ಮ ಸದ್ಯದ ವಿವಾಹ ಪದ್ಧತಿಯ ಪರಿಣಾಮವೇನು. ಎಂಬುದನ್ನಷ್ಟೆ ಆಲೋಚಿಸೋಣ.

ಒಟ್ಟಿನಲ್ಲಿ ಹೇಳಬೇಕಾದರೆ ಒಂದು ಅನನುಭೂತ ಸೌಖ್ಯಕ್ಕಾಗಿಯೇ ವಿವಾಹವಾಗುತ್ತದೆ. ಪೂರ್ವಕಾಲಕ್ಕೆ ಈಗಿನಂತೆ ಕೇವಲ ಹಣಗಳಿಸುವದೇ ಮುಖ್ಯವಾಗಿರಲಿಲ್ಲ. ಈ ಹಣದಿಂದ ದಾನಧರ್ಮಗಳನ್ನು ನಡಿಸಿ ತನ್ನ ಉನ್ನತಿಯನ್ನು ಸಾಧಿಸಿಕೊಳ್ಳುತ್ತಿದ್ದನು. ಆದ್ದರಿಂದ ವಿವಾಹಕ್ಕಾಗಿ ಹಣವನ್ನು ನೀರಿನಂತೆ ವೆಚ್ಚಮಾಡುತ್ತಿದ್ದನು. ಆ ಪದ್ಧತಿಯೇ ಈಗಲೂ ನಡೆದಿದೆ. ಈಗಿನ ವಿವಾಹದವೆಚ್ಚು ಇಂತಿದೆ:—

| | | |
|---|---|---|
| ಕನ್ಯಾನಿಶ್ಚಯಕ್ಕೆ | ೩೫—೦—೦ | |
| ಚಿಕ್ಕ ವೀಳ್ಯೆ | ೩೦೦—೦—೦ | |
| ಹಬ್ಬಗಳ ಕಾಣಿಕೆ | ೧೦೦—೦—೦ | |
| ದೊಡ್ಡವೀಳ್ಯೆ | ೬೦೦—೦—೦ | |
| ಹಸಿರುಬಳ್ಳಿ ಲಗ್ನನಿಶ್ಚಯ | ೭೫—೦—೦ | |
| ಲಗ್ನಕ್ಕೆ | ೪೦೦—೦—೦ | ಸ್ವಲ್ಪ ಹೆಚ್ಚುಕಡಿಮೆ |

ಹೀಗೆ ಖರ್ಚುಮಾಡುವರು. ಇದು ವರನಕಡೆಯ ಖರ್ಚು. ವಧುವಿನ ಕಡೆಯವರಿಗೂ ಸ್ವಲ್ಪ ಹೆಚ್ಚುಕಡಿಮೆ ಇಷ್ಟೇ ವೆಚ್ಚಬರುವದು. ಮೊದಲಿನಕಾಲದಲ್ಲಿ ಪ್ರತಿಯೊಬ್ಬನ ಆರ್ಥಿಕಸ್ಥಿತಿಯು ಸರಿಯಾಗಿರುತ್ತಿದ್ದುದರಿಂದ ಒಂದು ಲಗ್ನವಾಗುವವರೆಗೆ ಹಣಸೂರೆಮಾಡುತ್ತಿದ್ದನು ಆದರೆ ಕಾಲಬದಲಾಯಿಸುತ್ತ ಬಂದು ಹಣವಿಲ್ಲದೆ ಬಡವನಾದರೂ ಹಣವಿದ್ದಾಗಿನ ವಿಲಾಸಿ ಪದ್ಧತಿಯನ್ನೇ ಜಾರಿಯಲ್ಲಿಟ್ಟರು. ಲಗ್ನವಂತೂ ಆಗಬೇಕು. ಅ

ದಕ್ಕೆ ಹಣಪಾತ್ರ ಇಲ್ಲ ಅದಕ್ಕಾಗಿ ಎಲ್ಲಿಯಾದರೂ ಹೇಗಾದರೂಮಾಡಿ ಸಾಲತಂದು ಲಗ್ನವಾಗುವನು ಆದರೆ ಲಗ್ನಾನಂತರ ಆ ಸಾಲಕ್ಕಾಗಿ ದುಡಿದು ಹತಾಶನಾಗಿ ಅಯ್ಯೋ ಎಂದು ನಿಟ್ಟಿಸುರು ಹಾಕುತ್ತ ನಿರಾಶನಾಗಿ ಜೀವಿಸುವನು. ಹೆಂಡತಿ ಮಕ್ಕಳೊಡನೆ ಕಂಗಾಲನಾಗಿ ಸಾಗುವನು. ಯಾವ ಸೌಖ್ಯವು ಮೃಗಜಲದಂತಾಗಿ ಜೀವನವೆಂದರೆ ಚಿಂತಿಯ ಆಗರವಾಗಿ ಪರಿಣಮಿಸುವದು ಹಗಲಿರುಳು ಸಾಲಕ್ಕಾಗಿ ಚಿಂತಿಸುವ ಮನುಷ್ಯನು ಆತ್ಮೋನ್ನತಿಗಾಗಿ ಏನನ್ನೂ ಮಾಡಲಾರನು. ಆದಕಾರಣ ದೋಷಪೂರಿತವಾದ ಇಂದಿನ ವಿವಾಹ ಪದ್ಧತಿಯನ್ನು ಕಿತ್ತುಹಾಕಿ ಈಗಿನಪರಿಸ್ಥಿತಿಗೆ ಸರಿಯಾಗುವ ಹೊಸ ವಿವಾಹ ಪದ್ಧತಿಯನ್ನು ಜಾರಿಯಲ್ಲಿ ತರಬೇಕಾದುದು ಅವಶ್ಯವಾಗಿದೆ ಯಾಕಂದರೆ ಕಲಾಲಲ್ಲಿ ನೂರರಲ್ಲಿ ಒಂದು ಮನೆಯಾದರೂ ಸಿರಿವಂತರದಿಲ್ಲ. ಎಂದಮೇಲೆ ಸಿರಿವಂತಿಕೆಯ ಈ ಪದ್ಧತಿ ಯೋಗ್ಯವಾದುದಲ್ಲ ಅದಕ್ಕಾಗಿ ಕೆಲ ಮಹಾನುಭಾವರ ಪ್ರಯತ್ನದಿಂದಾಗಿ ಹಿಂದಿನ ಪದ್ಧತಿ ಮೆಲ್ಲನೆ ಮಾಯವಾಗಹತ್ತಿದೆ. ಆದರೆ ಅದು ಪೂರ್ಣವಾಯವಾಗಬೇಕು ಈ ವಿಷಯದಲ್ಲಿ ಹುಬ್ಬಳ್ಳಿಯ ನಮ್ಮ ಸಮಾಜದವರು ಆದರ್ಶರಾಗಿದ್ದಾರೆ. ಹೊಸ ಪದ್ಧತಿಯನ್ನು ನಾವು ಹೀಗೆ ಮಾಡಿಕೊಳ್ಳಬಹುದು ನಿಶ್ಚಯಕಾರ್ಯವು ಸಾದಾ ರೀತಿಯಿಂದ ಅಜಮಾಸು ಹತ್ತು ರೂಪಾಯಿ ವೆಚ್ಚದಲ್ಲಿ ಆಗಬಹುದು. ಆಗಬೇಕು. ವೀಳ್ಯೆ ಹಬ್ಬಗಳು ಮಾಯವಾಗಬೇಕು, ಲಗ್ನಪತ್ರನಿಶ್ಚಯಕ್ಕೆ ಹತ್ತು ರೂಪಾಯಿ ವೆಚ್ಚಮಾಡಬಹುದು. ಮುಂದೆ ಲಗ್ನವು ಅತಿ ವೆಚ್ಚವೆಂದರೆ ಒಂದು ನೂರು ರೂಪಾಯಿಗಳಲ್ಲಿ ಮಾಡಬಹುದು ಇದರಲ್ಲಿ ಕೆಲಭಾಗವು ಶಿಕ್ಷಣಪಡೆಯುವ ಕಲಾಲ ವಿದ್ಯಾರ್ಥಿವಸತಿ ಫಂಡಿಗೆ ಕಾಣಿಕೆಯಾಗಿ ಸಲ್ಲಿಸಬೇಕು. ಅಂತೂ ಒಟ್ಟು ಲಗ್ನಮುಗಿಯುವವರೆಗೆ ವರ-ವಧು ಪಕ್ಷಗಳೆರಡಕ್ಕೂ ಕೂಡಿ ವೆಚ್ಚವೆಂದರೆ ಎರಡುನೂರಾಐವತ್ತು ರೂಪಾಯಿಗಳಲ್ಲೇ ಕೆಲಸಮುಗಿಯಬೇಕು.

ಹೀಗಾದರೇನೇ ವಿವಾಹದಿಂದ ದೊರೆಯಬಹುದಾದ ಆನಂದವು ದೊರೆತು ಜೀವಿಸಲಿಕ್ಕೆ ಸ್ಫೂರ್ತಿಸಿಕ್ಕು ತನ್ನ ಬಾಳಿಂದ ರಥವನ್ನು ಗುರಿಯ ಮಾರ್ಗದಲ್ಲಿ ಸಾಗಿಸಲು ಅನುಕೂಲವಾಗುವದು. ಈ ಪದ್ಧತಿಯನ್ನು ಮೊದಲು ಸಿರಿವಂತರು, ಕಲಿತವರು, ನಾಗರಿಕರು ಜಾರಿಯಲ್ಲಿ ತರಬೇಕು.

ಅಂದರೆ ಉಳಿದವರು ಅನುಸರಿಸಲಿಕ್ಕೆ ಮಾರ್ಗವಾಗುತ್ತದೆ. ಹೀಗೆ ಮಾಡಿದಾಗಲೇ ಕಲಾಲರು ಅನುಭವಿಸಬೇಕಾದ ಸಾಲವೆಂಬ ಶೂಲದಿಂದ ಪಾರಾಗುವರು. ಈ ಮಾರ್ಗದಿಂದ ನಮ್ಮ ಹಳೆಯ ಯಜಮಾನರಿಗೆ ಸಿಟ್ಟು ಬರಬಹುದು. ಆದರೆ ಅವರೂ ನಿಷ್ಕಲ್ಮಷ ಮನದಿಂದ ಶಾಂತರಾಗಿ ತಮ್ಮೊಳಗೆ ತಾವೇ ವಿಚಾರಿಸಿಕೊಂಡರೆ ಈ ದಾರಿ ಸುಗಮ ಸರಿ ಎಂದು ಸಹಜ ತಿಳಿಯುವದು. ಆದ್ದರಿಂದ ಈ ವಿವಾಹ ಪದ್ಧತಿ ಪೂರ್ಣವಾಗಿ ಬದಲಾಗಬೇಕಾದುದು ಅತ್ಯಂತ ಅವಶ್ಯವಾಗಿದೆ. ಇದರಲ್ಲಿ ಇನ್ನೂ ಕೆಲತೊಡಕುಗಳಿವೆ. ಅವುಗಳನ್ನು ಮುಂದಿನ ಪ್ರಕರಣದಲ್ಲಿ ನೋಡೋಣ.

**ರಾಜಕಾರಣ:—**

ಇಂದು ಅತ್ಯಂತ ಬಲಾಢ್ಯ ಹಾಗೂ ಮುಂದುವರಿದ ದೇಶಗಳು ಇನ್ನೂ ಬಾಲ್ಯವಸ್ಥೆಯಲ್ಲಿರುವಾಗ ಭಾರತೀಯರಾದ ನಾವು ರಾಜ್ಯಗಳನ್ನು ಕಟ್ಟಿ ಭೂ, ಜಲಮಾರ್ಗವಾಗಿ ಜಗತ್ತಿನೊಡನೆ ವ್ಯವಹಾರಸಾಗಿಸುತ್ತಿದ್ದವು. ಅಲ್ಲದೆ ಅಲ್ಲೆಲ್ಲಿಯೂ ನಮ್ಮ ಸಂಸ್ಕೃತಿಯ ಪ್ರಚಾರಮಾಡುತ್ತಿದ್ದೆವು. ಆದರೆ ಇಂದು ಪರಿಸ್ಥಿತಿ ವಿಪರೀತವಾಗಿದೆ. ನಾವಿಂದು ಜಗತ್ತಿನಲ್ಲಿ ಗುಲಾಮರಾಗಿದ್ದೇವೆ, ಪರಕೀಯರ ಆಳಿಕೆಗೆ ಒಳಗಾಗಿದ್ದೇವೆ. ಭೂಮಂಡಲದ ಒಂದೈದಾಂಶದಷ್ಟು ಜನಸಂಖ್ಯೆ ಇರುವ ಒಂದು ಖಂಡದಷ್ಟು ವಿಸ್ತಾರವಾದ ಭೂ, ಜಲ, ಆಕಾಶ ಮಾರ್ಗಗಳ ಅನುಕೂಲವಿರುವ ಶಾಸ್ತ್ರ, ತತ್ವಗಳ ಮಹಾಗ್ರಂಥ ಭಾಂಡಾರಗಳಿರುವ ನಾಲ್ವತ್ತುಕೋಟಿ ಜನಸಂಖ್ಯೆಯುಳ್ಳ ರಾಷ್ಟ್ರವು ಇಂದು ಪಾರತಂತ್ರದಲ್ಲಿದೆ. ಅದು ಭಾರತ, ಹಿಂದುಸ್ಥಾನ ಈ ಪ್ರಶ್ನೆ ಪ್ರತಿಯೊಬ್ಬ ಭಾರತೀಯನ ಅಂತರಾಳವನ್ನು ಅಲ್ಲೋಲ ಕಲ್ಲೋಲ ಮಾಡುತ್ತದೆ. ಭಯಾನಕವಾದ ಈ ಯಾತನೆಯಿಂದ ಬಿಡುಗಡೆಯಾಗಲು ಈ ಸಂಕೋಲೆಗಳನ್ನು ಮುರಿದೊಗೆಯಲು ಇಂದು ಎಲ್ಲರೂ ಹೋರಾಡುತ್ತಿದ್ದಾರೆ. ಆ ಹೋರಾಟವು ಇಂದು ಜಗತ್ತಿನಲ್ಲಿ ಆದರ್ಶವಾಗಿದೆ. ಇಂದು ರಾಜ್ಯ ಸಿರಿವಂತಿಕೆಯ ಬೆಳವಣಿಗೆಗಾಗಿ ನಡೆದಿರುವ ವಿಶ್ವಮೇಧವು ದಿನಾಲು ಸಹಸ್ರಾರು ಜನರನ್ನು ಆಹುತಿಯಾಗಿ ತೆಗೆದುಕೊಂಡು ಇನ್ನೂ ಹೆಚ್ಚು ತಿನ್ನಲು ಬಾಯಿತೆರೆಯುತ್ತದೆ. ಅದು ಪಾಶವೀ ಹೋರಾಟ! ಹಿಂದುದೇಶವೂ ತನ್ನ ಬಂಧವಿಮೋಚನಕ್ಕಾಗಿ ತಾನೂ ಮಾನವನಾಗಿ ಬಾಳುವದ

ಕ್ಕಾಗಿ ಹೋರಾಡುತ್ತದೆ. ಅದು ಸ್ನೇಹಮಯ ಹೋರಾಟ! ಹಿಂದೆ ಪುರಾಣ ಇತಿಹಾಸಗಳು ಸ್ವಾತಂತ್ರ್ಯಕ್ಕಾಗಿ ರಕ್ತಸುರಿಸಿದ ಕಥೆಗಳನ್ನೇ ಸಾರುತ್ತದೆ ಬಾರಿಗಾಣದ ಜನತೆಗೆ ಸನ್ಮಾರ್ಗವನ್ನು ತೋರುವವಕ್ಕಾಗಿ ಅವತಾರ ಪುರುಷರು ಒಂದು ಬೆಳಕಿನಲ್ಲಿ ಕರೆದೊಯ್ಯುವಾಗಲೂ ರಕ್ತಪಾತಮಾಡಿದ್ದಾರೆ ಇಂದು ಮಾತ್ರ ಪರಿಸ್ಥಿತಿ ವಿಪರೀತವಾಗಿದೆ ರಕ್ತಪಾತವಿಲ್ಲದೆ ಸ್ನೇಹದಿಂದಾಗಿ ಶಾಂತಿಯಿಂದಾಗಿ ಸ್ವಾತಂತ್ರಪಥದಲ್ಲಿ ಬಂದು ಅದ್ವಿತೀಯ ವಿಭೂತಿಯು ನಮ್ಮ ಹೆಜ್ಜೆಗಳನ್ನಿಡಿಸುತ್ತ ಸಾಗಿದೆ

ಇಂದು ನಮಗೆ ನ್ಯಾಯವಾಗಿ ಸಿಗಬೇಕಾಗಿದೆ ಸ್ವಾತಂತ್ರ್ಯ! ಅದಕ್ಕಾಗಿ ಅಹಿಂಸಾ ಪಥದಲ್ಲಿ ಹೋರಾಟಸಾಗಿಸಿಕೊಂಡು ತನ್ನಾಶ್ರಯದಲ್ಲಿ ಕರೆದೊಯ್ಯುತ್ತಿರುವ ಆ ಮಹಾನುಭಾವನು ಮಹಾತ್ಮಾಜಿ. ಭಾರತವು ತನ್ನ ಸ್ವಾತಂತ್ರ್ಯಸಾಧನೆಗಾಗಿ ಕಾಂಗ್ರೆಸ್ಸೆಂಬ ಸಂಸ್ಥೆಯನ್ನು ಸ್ಥಾಪಿಸಿಕೊಂಡು ಅದರ ಮುಖಾಂತರವಾಗಿ ಹೋರಾಡುತ್ತದೆ. ಕಾಂಗ್ರೆಸ್ಸಿನಂತೆ ಹೋರಾಡುವ ಬೇರೆ ಸಂಸ್ಥೆಗಳಿದ್ದರೂ ಅವು ಯಾವದೋ ಒಂದು ಸ್ವಾರ್ಥಸಾಧನೆಗಾಗಿ ಬಡಿದಾಡುತ್ತವೆ. 'ಆದರೆ ಕಾಂಗ್ರೆಸ್ಸು ಕೇವಲ ಹಿಂದೀಯರ ಹಿತಕ್ಕಾಗಿ ತನ್ನ ಜೀವವನ್ನೇ ಮುಡುಪಾಗಿರಿಸಿದೆ. ಜಗತ್ತಿನ ಮಹಾ ಮಹಾ ಪಂಡಿತರನ್ನು ರಾಜಕಾರಣಗಳನ್ನು ತಮ್ಮ ತತ್ವ ಪ್ರತಿಪಾದನೆಯಿಂದಾಗಿ ಮರುಳುಮಾಡುವ ಹಿರಿಯರು ಕಾಂಗ್ರೆಸ್ಸಿನ ಕೈವಾರಿಗಳಾಗಿ ಕೇವಲ ಸ್ವಾತಂತ್ರ್ಯಕ್ಕಾಗಿ ನಿಸ್ವಾರ್ಥದಿಂದ ದುಡಿಯುತ್ತಿದ್ದಾರೆ.

ಸೂರ್ಯವಂಶ ಕ್ಷತ್ರಿಯರೆಂದರೆ ಕಲಾಲರು. ಎಂದಿನಿಂದಲೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಅಂದು ಕೇವಲ ಸ್ವಾತಂತ್ರ್ಯಕ್ಕಾಗಿಯಲ್ಲವೇ ರಾಜಪುತಾನಸ್ಥಾನದಿಂದ ಕರ್ನಾಟಕಕ್ಕೆ ಬಂದದ್ದು ಮೂರುನೂರು ವರ್ಷಗಳಷ್ಟು ಅವಧಿಯಲ್ಲಿ ನಾವು ಭಾರತದೊಡನೆ ಅಧೋಗತಿಯ ಮಹಾ ಕೂಪದಲ್ಲಿ ಬಿದ್ದಿದ್ದೇವೆ. ಮರೆಯಲಾರದಂಥ ಪೆಟ್ಟುಗಳನ್ನು ತಿಂದು ಅನುಭವಿಸಿದ್ದೇವೆ. ನಾವು ಇಂದು ನಮ್ಮ ಉದ್ಧಾರಕ್ಕಾಗಿ ಹೋರಾಡಬೇಕು! ಹೇಗೆ ಹೋರಾಡಬೇಕು. ಹಿಂದೀಯರ ಹಿತವೇ ನಮ್ಮಹಿತ! ಅಲ್ಲವೇ? ಆದ್ದರಿಂದ ಹಿಂದೀಯರಿಗಾಗಿ ಹೋರಾಡುತ್ತಿರುವ ಕಾಂಗ್ರೆಸ್ಸಿನ ಅನುಯಾ

ಯಿಗಳಾಗಿ ನಮ್ಮಿಂದಾದಷ್ಟು ಸೇವೆಮಾಡಬೇಕು. ಅಂದರೇನೇ ನಮ್ಮ ಹಿತವಾಗುತ್ತದೆ. ಅಲ್ಲದಿದ್ದರೆ ನಮ್ಮ ಹಿತವೆಂದರೆ ಆದೊಂದು ಗಾಳಿಗೋಪುರ ಆದ್ದರಿಂದ ಇಂದು ಪ್ರತಿಯೊಬ್ಬ ಕಲಾಲನೂ ಕಾಂಗ್ರೆಸ್ಸನ್ನು ಸೇರಿ ತನ್ನಿಂದಾದಷ್ಟು ಸೇವೆಸಲ್ಲಿಸಿ ಭಾರತಾಂಬೆಯ ಋಣ ತೀರಿಸಬೇಕು.

ಇಂದು ನಮ್ಮೆದುರಿಗೆ ಇನ್ನೊಂದು ಪ್ರಶ್ನೆ ಮತ್ತೊಂದು ನಿಂತಿದೆ. ಅದೆಂಬರೆ- ಇಂದು ನಾವು ಕನ್ನಡಿಗರು. ಕರ್ನಾಟಕವು ಹರಿದು ಹಂಚಿ ಅನೇಕರ ಆಳಿಕೆಗೊಳಪಟ್ಟಿದೆ. ಸ್ವಾತಂತ್ರ್ಯವು ನಮ್ಮ ಕೊನೆಯ ಧ್ಯೇಯವಾಗಿದ್ದರೆ ಕನ್ನಡನಾಡನ್ನು ಒಂದೇಆಳಿಕೆಯಲ್ಲಿ ತರುವದು ಇಂದಿನ ಧ್ಯೇಯವಾಗಿದೆ ಅದಕ್ಕಾಗಿ ಕರ್ನಾಟಕ ಏಕೀಕರಣ ಸಂಘವು ಅಂದೋಲನನ್ನಾರಂಭಿಸಿದೆ ಏಕೀಕರಣಕ್ಕಾಗಿ ನಡೆಯಿಸಿದ ಈ ಮಹಾ ಪ್ರಯತ್ನದಲ್ಲಿ ಕಲಾಲರೂ ಭಾಗಿಗಳಾಗಬೇಕು. ಆದಕಾರಣ ಪ್ರತಿಯೊಬ್ಬ ಸೂರ್ಯವಂಶ ಕ್ಷತ್ರಿಯ ಬಾಂಧವರೂ ಇಂದು ಏಕೀಕರಣ ಸಂಘದ ಸದಸ್ಯರಾಗಿ ಉಳಿದ ಕನ್ನಡಿಗರೊಡನೆ ನಾವೂ ಈ ಕಾರ್ಯಕ್ಕಾಗಿ ಧುಮುಕಬೇಕು. ಇದು ಕಲಾಲರ ಭಾವೀ ಮುಖ್ಯ ಸಮಸ್ಯೆ. ಆದ್ದರಿಂದ ಇಂದು ಪ್ರತಿಯೊಬ್ಬ ಬಾಂಧವರೂ ಯಾರದಾರಿಯನ್ನು ಕಾಯದೆ ಏಕೀಕರಣ ಸಂಘದ ಸದಸ್ಯನಾಗಿ ಕನ್ನಡ ತಾಯಿಯ ಪೂಜೆ ಮಾಡಬೇಕು.

# ಪರಿಹಾರ

ಇಷ್ಟು ಸಮಸ್ಯೆಗಳನ್ನು ಈ ವರೆಗೆ ವಿವೇಚಿಸಿದೆವಾದರೂ ಇನ್ನೂ ಅನೇಕ ಸಮಸ್ಯೆಗಳು ನಮ್ಮನ್ನು ಜಗ್ಗುತ್ತಿವೆ. ಸದ್ಯದ ಪರಿಸ್ಥಿತಿಯಲ್ಲಿ ಈ ಮುಖ್ಯ ಸಮಸ್ಯೆಗಳಷ್ಟೇ ಸಾಕು. ಇವುಗಳನಂತರ ಅವುಗಳನ್ನು ವಿಚಾರ ಮಾಡಬಹುದು. ಆದರೆ ಈ ಸಮಸ್ಯೆಗಳನ್ನು ನಾವು ಹೇಗೆ ಯಶಸ್ವಿಯಾಗಿ ದಾಟಬೇಕೆಂಬದನ್ನೀಗ ನೋಡೋಣ.

**ಶಿಕ್ಷಣ:—**

ನಮ್ಮ ಮಕ್ಕಳಿಗೆ ಶಿಕ್ಷಣ ಕೊಡಬೇಕು ಎಂದು ಬರಿಯ ಬಾಯಿಂದ ಹೇಳಿದರೆ ಆಗದು. ಅದು ಕೃತಿಯಲ್ಲಿ ಬರಬೇಕಾದುದು ಅವಶ್ಯ. ಈ ವಿಷಯದಲ್ಲಿ ಪ್ರತಿಯೊಬ್ಬ ಸೂರ್ಯವಂಶ ಕ್ಷತ್ರಿಯನೂ ತನ್ನ ಮಕ್ಕಳಿಗೆ ಓದು ಬರೆಹ ಕಲಿಸಬೇಕೆಂದು ಉತ್ಕಟಭಾವವನ್ನು ತಾಳಿ ಮೊದಲು ತನ್ನ ಮಕ್ಕಳಿಗೆ ಶಾಲೆಗೆ ಕಳಿಸಬೇಕು. ಇದಕ್ಕೆ ಸರಕಾರ ಹಾಗೂ ಸಾರ್ವಜನಿಕ ಸಂಸ್ಥೆಗಳು 'ತಮ್ಮ ಒತ್ತಾಯವನ್ನು ಮಾಡಬೇಕು. ಇಷ್ಟಾದರೆ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಾದಂತೆಯೇ ಸರಿ. ಇನ್ನು ಮಾಧ್ಯಮಿಕ ಉಚ್ಚ ಔದ್ಯೋಗಿಕ ಶಿಕ್ಷಣವು ನಮಗೆ ಹೇಗೆ ದೊರೆಯಬೇಕು? ತನ್ನ ಕುಟುಂಬ ಪೋಷಣೆಯೇ ತನಗೆ ಭಾರವಾಗಿರುವಾಗ ನೀರಿನಂತೆ ಹಣ ವೆಚ್ಚಮಾಡಿ ತನ್ನ ಮಕ್ಕಳಿಗೆ ಹೇಗೆ ಶಿಕ್ಷಣಕೊಡಿಸುತ್ತಾನೆ. ಶಿಕ್ಷಣವಿಲ್ಲದೆ ನಾವು ಮುಂದೆ ಬರುವದು ಹೇಗೆ? ಅದಕ್ಕಾಗಿ ಕರ್ನಾಟಕದ ಕಲಾಲರೆಲ್ಲರೂ ಒಂದು ಮಧ್ಯವರ್ತಿ ಊರಲ್ಲಿ ಶಿಕ್ಷಣದ ಅನುಕೂಲವಿದ್ದಲ್ಲಿ ನಮ್ಮ ಸಮಾಜದ ವಿದ್ಯಾ

ರ್ಥಿಗಳಿಗಾಗಿ ಒಂದು ಬೋರ್ಡಿಂಗನ್ನು ಸ್ಥಾಪಿಸಬೇಕು. ಆದರೆ ಅದಕ್ಕೆ ದೊಡ್ಡ ಪ್ರಮಾಣದಲ್ಲಿ ಭಾಂಡವಲು ಬೇಕು ನಿಜ ಕಲಾಲರಲ್ಲಿ ಬಡವರಿದ್ದಂತೆ ಹೆಚ್ಚಿನ ಸಿರಿವಂತರೂ ಇದ್ದಾರೆ ಇಂದು ಒಂದೊಂದು ಅಂಗಡಿಗಳ ಲಿಲಾವಿನಲ್ಲಿ ನೂರು, ಸಾವಿರಗಳ ಸಂಖ್ಯೆಯಿಂದ ಹಣಹಾರಿಸುವ ಎದೆಗಾರಿಕೆಯನ್ನು ಮಾಡಿದವರೂ ಇದ್ದಾರೆ. ಅವರು ಈ ವಿಷಯದಲ್ಲಿ ಉದಾರಹೃದಯಿಗಳಾಗಿ ಧನಸಹಾಯ ಮಾಡಿದರೆ ಮಾತ್ರ ಈ ಕೆಲಸವು ಸಾಧ್ಯವಾಗುವದು. ಇದರಲ್ಲಿ ಹಾನಿಯೂ ಇಲ್ಲ ಯಾಕಂದರೆ ಅವರು ಇಂದು ತಮ್ಮ ಮಕ್ಕಳಿಗೆ ಶಿಕ್ಷಣಕ್ಕಾಗಿ ಬೇರೆಕಡೆಗೆ ಇಟ್ಟು ಪ್ರತ್ತ್ಯೇಕವಾಗಿ ಹಣ ಖರ್ಚು ಮಾಡುವದಿಲ್ಲವೇ, ಅದೇ ಹಣವನ್ನು ಇಂಥ ಸಾರ್ವಜನಿಕ ಸಂಸ್ಥೆ ಸ್ಥಾಪನೆಗೆ ಕೊಟ್ಟರೆ ತಮ್ಮ ಮಕ್ಕಳಿಗೆ ವಿದ್ಯೆಕಲಿಸುವದರ ಜೊತೆಗೆ ಸಮಾಜದ ಬಡ ಮಕ್ಕಳು ಕೂಡಿ ವಿದ್ಯೆಕಲಿತು ಮುಂದೆಬಂದು ನಮ್ಮ ಸಮಾಜವು ಸರ್ವ ರೀತಿಯಿಂದಲೂ ಮುಂದೆವರಿಯಲು ಮಾರ್ಗದೊರೆಯುವದು. ಅದಕ್ಕಾಗಿ ಪ್ರತಿಯೊಬ್ಬರೂ ಈ ಬಗ್ಗೆ ಧನ ಸಹಾಯ ಮಾಡಬೇಕಾಗುವದು ಅತ್ಯಂತ ಅವಶ್ಯ ಈ ಕೆಲಸವು ಸಣ್ಣದಲ್ಲ ಇದು ಯಾರೊಬ್ಬರಿಂದಲೂ ಪೂರೈಸುವದು ಸಾಧ್ಯವಿಲ್ಲ. ಈ ವಿಚಾರವು ಕಾರ್ಯಕಾರಿಯಾಗಬೇಕಾದರೆ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘವು ಎಚ್ಚತ್ತು ಕಾರ್ಯಾರಂಭ ಮಾಡಿದರೆ ಅದಕ್ಕೆ ಬೇಕಾಗುವ ಸಹಾಯುಸಿಕ್ಕುತ್ತದೆ. ಅದು ತನ್ನ ಕೈಕೆಳಗೆ ಒಂದು ಮಂಡಲವನ್ನು ಸ್ಥಾಪಿಸಿ ಅದರಮುಖಾಂತರ ಆ ಬೋರ್ಡಿಂಗಿನ ವ್ಯವಹಾರಸಾಗುವಂತೆ ಮಾಡಬೇಕು. ಅಲ್ಲದೆ ಈ ಸಂಸ್ಥೆಯು ಕೊನೆಯವರೆಗೂ ನಡೆಯುವದಕ್ಕಾಗಿ ವಿದ್ಯಾಫಂಡು ಎಂದು ಪ್ರತಿಯೊಬ್ಬನೂ ತನ್ನ ಉತ್ಪನ್ನದಲ್ಲಿ ವಾರಕ್ಕೆ ಇಂತಿಷ್ಟು ಎಂದು ಹಣಕೊಡುತ್ತ ಹೋಗಬೇಕು. ಹೀಗಾದರೇನೇ ಸೂರ್ಯವಂಶ ಕ್ಷತ್ರಿಯ ಮಕ್ಕಳ ವಿದ್ಯಾಭ್ಯಾಸವಾಗುವದು.

**ಉದ್ಯೋಗ:—**

ಇನ್ನು ಉದ್ಯೋಗಗಳ ಬಗ್ಗೆ ಸ್ವಲ್ಪ ನಿಷ್ಠುರವಾಗಿಯೇ ಹೇಳಬೇಕಾಗಿದೆ. ಭಾವೀದಿನಗಳಲ್ಲಿ ನಮ್ಮ ಉದ್ಯೋಗಗಳ ಮೇಲೆ ಪೂರ್ಣ ಪರಿಣಾಮವಾಗುವದು ನಿಶ್ಚಿತ. ಯಾಕಂದರೆ ಕೊನೆಗೊಮ್ಮೆ ನಮ್ಮ ದೇಶದ ಸ್ವಾತಂತ್ರ್ಯದ ಪ್ರಶ್ನೆ ಬಗೆಹರಿಯಲೇಬೇಕು. ಆಗ ಮಾತ್ರ ಈ ಉದ್ಯೋಗಗಳು

ಪೂರ್ಣವಾಗಿ ಇಲ್ಲದಂತಾಗುವದು ಖಂಡಿತ. ಪ್ರತಿಯಾಗಿ ಇತರ ಉದ್ಯೋಗಗಳು ಭರದಿಂದ ಬೆಳೆದು ಜಗತ್ತಿನ ಎಲ್ಲಾ ಪೇಟೆಗಳಲ್ಲಿಯೂ ನಮ್ಮ ವ್ಯಾಪಾರವು ನಡೆದು ನಮ್ಮ ಬಾವುಟವೇ ಎಲ್ಲೆಲ್ಲೋ ಮೆರೆಯುತ್ತದೆ. ಸರಕಾರವು ಮಧ್ಯಪಾನವನ್ನು ಪ್ರತಿಬಂಧಮಾಡಲೇಬೇಕು. ಯಾಕಂದರೆ ಇದರಿಂದ ಪ್ರಜೆಗಳಿಗೆ ಸುಖ ಶಾಂತಿಗಳು ಸಿಗಲಾರವು. ಮತ್ತು ಅರೆಹೊಟ್ಟೆಯಿಂದ ಉಂಡು ಬಡತನಬೇಗೆಯಿಂದ ಬೆಂದು ಹೆಂಡಿರು ಮಕ್ಕಳು ಕೂಳಿಲ್ಲದೆ ಒರಲುತ್ತಾರೆ. ಇಂದಿನ ಮಧ್ಯಪಾನದ ದುಸ್ಥಿತಿಯನ್ನೂ ಪರಿಣಾಮವನ್ನೂ ನಗ್ನಸ್ಥಿತಿಯಲ್ಲಿ ಕಂಡು ಹಾ ಎಂದು ಉಸಿರುಹಾಕುವ ಭಾವೀ ಹಿಂದೀ ಜನಾಂಗದ ಸುಖ ಸೌಲಭ್ಯಗಳಿಗಾಗಿ ಟೊಂಕಕಟ್ಟಿದ ಮಹಾಸಂಸ್ಥೆಯು ನಾಳೆ ಸರಕಾರನಡೆಸುವಾಗ ಈ ಸ್ಥಿತಿಯನ್ನು ಎಂದೂ ಇರಗೊಡಲಾರದು. ಆದ್ದರಿಂದ ಮುಂದೆ ಈ ಉದ್ಯೋಗವು ಮುಳುಗುವದು ನಿಶ್ಚಯ. ಅದಕಷ್ಟಗಿ ನಾವು ಇಂದು ಈ ಉದ್ಯೋಗವನ್ನು ಬಿಡುವ ವ್ಯವಸ್ಥೆಯಲ್ಲಿರಬೇಕಲ್ಲದೆ 'ನಮ್ಮ ಮಕ್ಕಳಿಗೆ. ಇದರಿಂದ ದೂರವಿರಿಸಬೇಕು.

ಬಹುಕಾಲದಿಂದ ಈ ಉದ್ಯೋಗಗಳಿಂದ ವಿಲಾಸತೆಯನ್ನನುಭವಿಸಿ ಪರಾಧೀನವಾದ ಇಂದ್ರಿಯಗಳು ಬೇರೆ ಉದ್ಯೋಗ ಮಾಡುತ್ತಿದ್ದಾಗ ಸರಿಯಮಿಸುವದು ಶಕ್ಯವೇ. ಎಂದು ಯೋಚಿಸಿ ಗಾಬರಿಗೊಳ್ಳಬಹುದು. ಆದರೆ ಸ್ವಲ್ಪ ಸಂಯಮರಾಗಿ ವರ್ತಿಸಿದರೆ ಈಗಿದ್ದ ವಿಲಾಸೀ ಜೀವನಕ್ಕಿಂತ ಸರಳಜೀವನವೇ ಯೋಗ್ಯ ಎಂದು ಅನುಭವಕ್ಕೆ ಬರುವದು. ಆದ್ದರಿಂದ ಯಾರೂ ಈ ವಿಷಯಕ್ಕೆ ಚಂಚಲಮನಸ್ಕರಾಗದೆ ಬೇರೆಬೇರೆ ಉದ್ಯೋಗಗಳಲ್ಲಿ ತೊಡಗಬೇಕು. ಇನ್ನು ಮಾಂಸವಿಕ್ರಯಿಗಳ ವಿಷಯ ಮನುಷ್ಯನಾಗಿ ಪ್ರಾಣಗಳನ್ನು ಕೊಂದು ಅದರ ವ್ಯಾಪಾರದಿಂದ ಜೀವಿಸುವದೆಂದರೆ ಹಿಂದೂ ಧರ್ಮದವರಾದ ನಮಗೆ ಇನ್ನೂ ಕಾಣದಿರುವದು ಶೋಚನೀಯ ಇಂದು ನಮ್ಮನ್ನು ಈ ಉದ್ಯೋಗಗಳನ್ನು ಮಾಡುತ್ತಿರುವಧರ ಪರಿಣಾಮವಾಗಿ ಅಸ್ಪೃಶ್ಯರಿಗಿಂತ ಕೀಳಾಗಿ ಕಾಣುತ್ತಿದ್ದಾರೆ. ಬರಿಯ ಹೊಟ್ಟೆತುಂಬಿಕೊಂಡರಾಯಿತೆ, ವೇಶ್ಯೆಯೂ ತನ್ನ ಕರ್ಮದಿಂದ ಹೊಟ್ಟೆಹೊರೆಯುತ್ತಾಳೆ. ನಾಯಿಯೂ ತನ್ನ ಹೊಟ್ಟೆತುಂಬಿಕೊಳ್ಳುತ್ತದೆ. ಹಾಗೆ ನಾವು ಇಂಥ ಹೀನ ಉದ್ಯೋಗದಿಂದ ಹೊಟ್ಟೆತುಂಬಿಕೊಳ್ಳುವದು ಯೋಗ್ಯವೇ, ಮುಂದಿನ

ದಿನಗಳಲ್ಲಿ ಇಂಥ ಹೇಸಿಕರ್ಮಗಳೆಲ್ಲ ಹೇಳಹೆಸರಿಲ್ಲದಂತೆ ನಾಶವಾಗುತ್ತವೆ. ಆದ್ದರಿಂದ ನಾವು ಈಗಲೇ ಜಾಗ್ರತರಾಗಿ ಬೇರೆ ಉದ್ಯೋಗಗಳನ್ನು ಕೈಕೊಳ್ಳಬೇಕು. ಇಲ್ಲವಾದರೆ ಒಂದು ಭಯಂಕರವಾದ ಶಿಕ್ಷೆಯು ನಮಗಾಗಿ ಕಾದಿದೆ. ಆದ್ದರಿಂದ ನಮ್ಮವರು ಈ ವಿಷಯವನ್ನು ಗಮನಿಸಿ ತಮ್ಮ ಹಿತ ಮಾಡಿಕೊಳ್ಳುವದಕ್ಕಾಗಿ ಈಗ ನಡೆಸಿರುವ ಉದ್ಯೋಗದಷ್ಟೇ ಭಾಂಡವಲಿನಲ್ಲಿ ಮಿಠಾಯಿ ಮಾರಾಟ, ಎಣ್ಣೆಯ ಮಾರಾಟ, ಹಾಲಿನ ಮಾರಾಟ ಇಂಥ ಉದ್ಯೋಗಗಳನ್ನು ನಮ್ಮ ಮಾಂಸ ವಿಕ್ರಯಿ ಬಂಧುಗಳು ಕೈಕೊಳ್ಳಬೇಕು ಇಂಥ ಉದ್ಯೋಗಗಳಿಗೆ ಪೂರಕ ಉದ್ಯೋಗಗಳು ಅವಶ್ಯಬೇಕು. ಅವಕ್ಕಾಗಿ ಸ್ತ್ರೀಯರು ರಾಟಿಯಿಂದ ನೂಲು ತೆಗೆಯಬೇಕೆಂದು ಸೂಚಿಸಿದೆ. ಏನೂ ಕೆಲಸ ಮಾಡದಂತೆ ದಾರಿದ್ರ್ಯಲಕ್ಷ್ಮಿಯರಂತೆ ಕಾಲಕಳೆವ ನಮ್ಮ ಹೆಣ್ಣುಮಕ್ಕಳು ಈ ಕೆಲಸಕ್ಕೆ ತಿರಸ್ಕಾರದಿಂದ ಮೂಗು ಮುರಿಯಬಹುದು. ಆದರೆ ರಾಟಿಯಿಂದ ನೂಲುವದು ಶಾರೀರಿಕ ಸಂಕಷ್ಟದ ಉದ್ಯಮವಲ್ಲ. ಅದರಿಂದ ದೇಹಕ್ಕೆ ಒಂದು ಬಗೆಯ ವ್ಯಾಯಾಮವಾಗುವದಲ್ಲದೆ ಮನಸ್ಸಿಗೂ ಒಂದು ಬಗೆಯ ಶಾಂತಿದೊರೆಯುವದು. ಅಲ್ಲದೆ ನಮಗೆ ಆರ್ಥಿಕ ಪರಿಸ್ಥಿತಿಯ ತೊಳಲಾಟವೂ ಕಡಿಮೆಯಾಗುವದು. ಆದಕಾರಣ ಪ್ರತಿಯೊಬ್ಬರೂ ಒಂದೊಂದು ರಾಟಿಯನ್ನು ತರಿಸಿ ಹೆಣ್ಣುಮಕ್ಕಳಿಗೆ ನೂಲಲು ಹಚ್ಚಿ ನಮ್ಮ ದಾರಿದ್ರ್ಯಭೂತಕ್ಕೆ ಕೊಡಲಿ ಏಟು ಕೊಡುವದು ಅತ್ಯಂತ ಅವಶ್ಯವಾಗಿದೆ ನಮ್ಮನ್ನು ಉದ್ಯೋಗಗೇಡಿಗಳನ್ನಾಗಿ ಮಾಡುವ ವಿಚಾರವಿದು ಎಂದು ಗಾಬರಿಯಾಗದೆ ಜಗತ್ತಿನಲ್ಲಿಯ ಇತರ ಸಮಾಜಗಳ ಯೋಗ್ಯತೆ ಮಾನಗಳೊಡನೆ ನಮ್ಮ ಮಾನ ಹೇಗಿದೆ ಎಂಬುದನ್ನು ವಿಚಾರಿಸಿದರೆ ನಾನು ಸೂಚಿಸಿದ ಮಾರ್ಗವು ಯೋಗ್ಯವೆಂದು ಕಂಡುಬಂದು ಬೇರೆ ಉದ್ಯೋಗಗಳನ್ನು ಮಾಡುವ ಪ್ರವೃತ್ತಿ ತಾನೇಬರುವದು. ಅದಕ್ಕಾಗಿ ಪ್ರತಿಯೊಬ್ಬನು ತನ್ನಲ್ಲಿತಾನೇ ನಾನು ಅಸ್ಪೃಶ್ಯರಿಗಿಂತ ಕೀಳೇ ಎಂಬದನ್ನು ವಿಚಾರಿಸಿಕೊಳ್ಳಬೇಕು. ಎಂದರೆ ಎಲ್ಲಾ ತಾನೇವಿದಿತವಾಗುವದು. ಅದಕ್ಕಾಗಿ ಈ ಪ್ರಶ್ನೆಯನ್ನು ಸಹಾನುಭೂತಿ ಪೂರ್ವಕ ವಿಚಾರಿಸಿಕೊಳ್ಳಬೇಕೆಂದು ನನ್ನ ಆಗ್ರಹದ ಬೇಡಿಕೆ.

**ಇನ್ನು ಧಾರ್ಮಿಕ ವಿಷಯ:—**

ಮನುಷ್ಯನನ್ನು ಅಜ್ಞಾನದ ಕೆಸರಿನಿಂದ ಹೊರತೆಗೆದು ಆತನಿಗೆ ಸರಿ

ಯಾದ ದಾರಿತೋರಿಸಿ ಅದರಂತೆ ಆಚರಿಸಹಚ್ಚುವದಕ್ಕಾಗಿ ಧರ್ಮಸಂಸ್ಥೆಯ ಉದಯವಾಯಿತು. ಧರ್ಮೋಪದೇಶಕ್ಕಾಗಿ ಧರ್ಮಾಧಿಕಾರಿಗಳುಂಟಾದರು. ಅವರ ದಿವ್ಯ ಉಪದೇಶದಂತೆ ನಡೆಯುವದು ಒಂದು ಆಸಿರ್ವಚಸೀಯ ಗುರಿಯನ್ನು ಸಾಧಿಸುವದು ಹೀಗೆ ಧರ್ಮದ ಬಗ್ಗೆ ಹೇಳಬಹುದು. ಈ ಸಂಸ್ಥೆಯ ಅಧಿಕಾರಿಗಳು ತಮ್ಮ ಕರ್ತವ್ಯದಲ್ಲಿ ಸ್ವಾರ್ಥವನ್ನು ಬೆರೆಸಿದಾಗಲೇ ಈ ಕ್ಷತ್ರಿಯರೂ ಪರಿಸ್ಥಿತಿಯ ಸೆಳವಿಗೆ ಸಿಕ್ಕು ಅನಾಗರಿಕತೆಯಿಂದ ಕರ್ತವ್ಯವಿಮುಖರಾದಮೇಲಂತೂ ನಮ್ಮ ಧರ್ಮವೆಂದರೆ ವಿಡಂಬನಾತ್ಮಕ ನಾಟಕದಂತಾಗಿದೆ. ಇಂದು ಅವರು ನಮ್ಮ ಕಡೆಯಿಂದ ಕೇವಲ ಹಣ ದೋಚುವದಕ್ಕಾಗಿ ಬರುತ್ತಿದ್ದರೂ ಅದೂ ಅತಿಯಾದ ಆಗ್ರಹಮೂಲಕ ಬರುವರೆಂಬುದನ್ನು ನಾವು ಲಕ್ಷದಲ್ಲಿಡಬೇಕು ಶುಭಕಾರ್ಯಗಳಲ್ಲಿ ಒಂದು ಒಂದೆರಡು ಮಂತ್ರೋಚ್ಚಾರಣೆಯನ್ನು ಮಾಡುವದಕ್ಕಷ್ಟೇ ಧರ್ಮವಿಲ್ಲ. ಕಾಲಕಾಲಕ್ಕೆ ಜನತೆಗೆ ದಿವ್ಯ ಉಪದೇಶವನ್ನು ಮಾಡಿ ಕಲ್ಮಷವಾದ ಮನಸ್ಸಿಗೆ ಶುದ್ಧೀಕರಣಮಾಡುತ್ತಿದ್ದರೆ ಆ ಮಾತು ಬೇರೆಯಾಗಿತ್ತು. ಆದರೆ ಇಂದು ಹಾಗಿದೆಯೇ ಇಲ್ಲ ಆದ್ದರಿಂದ ನಾವಿಂದು ಅಧೋಗತಿಯನ್ನು ಅನುಭವಿಸುತ್ತಿದ್ದೇವೆ ಇವಕ್ಕೆ ಕಾರಣವೆಂದರೆ ಎರಕೊಳ್ಳುವವರ ಬುಡದಲ್ಲಿ ಡೊಗ್ಗುವ ಅಂಧಾನುಕರಣವೆ? ಅದಕ್ಕಾಗಿ ನಾವು ಸ್ವಯಂ ಶೂರರಾಗಬೇಕು. ವಿವಾಹಾದಿ ಶುಭ ಪ್ರಸಂಗಗಳಲ್ಲಿ ಒಂದೆರಡು ಮಂತ್ರಗಳನ್ನೆಂದರೆ ನಮ್ಮ ಉದ್ದೇಶ ಪೂರ್ಣವಾಗಲಿಲ್ಲ. ಧರ್ಮಾಚರಣೆಯಿಂದ ಮನುಷ್ಯನು ತನ್ನ ಯೋಗ್ಯತೆಯನ್ನರಿತು ಅಹಂಕಾರ, ಮತ್ಸರ, ವಂಚನೆಗಳನ್ನು ದೂರಿಕರಿಸಿ ಶಾಂತಿಯಿಂದ ಬಾಳಬೇಕಾದರೆ ಧರ್ಮವೆಂದರೇನು; ಅದು ಹೇಗಿದೆ. ಋಂಬುದನ್ನರಿತು ಆ ಮಾರ್ಗದಲ್ಲಿ ಸಾಗಬೇಕು. ಹಾಗೂ ಕಾಲಕಾಲಕ್ಕೆ ಜನತೆಗೂ ಉಪದೇಶವನ್ನಿತ್ತು ಎಚ್ಚರಗೊಳಿಸುವ ಮಾರ್ಗವನ್ನು ತೋರಿಸಬೇಕು. ಇಂದು ನಮ್ಮ ಧರ್ಮಾಧಿಕಾರಿಗಳೆಂದುಕೊಳ್ಳುವ ಮಹಾನುಭಾವರು ಒಮ್ಮೆಯಾದರೂ ಹೀಗೆಮಾಡಿದ್ದಾರೆಯೇ ಇಲ್ಲ. ನಾವಿಂದು, ಅವರಿಗೆ ಕೇಳಿದಾಗ ದಕ್ಷಿಣಾರೂಪದಲ್ಲಿ ಹಾಲುಕೊಡುವ ಆಕಳಿದ್ದಂತೆ ಹೀಗಾದರೆ ನಮ್ಮ ಉದ್ಧಾರವಾದೀತೆ ಇಲ್ಲ. ಆದ್ದರಿಂದ ಈ ಕಾರ್ಯದಲ್ಲಿ ಯೋಗ್ಯ ಪರಿಶೀಲನೆ ಮಾಡುವದಕ್ಕಾಗಿ ನಮ್ಮ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘವು ಶಿಕ್ಷಣಪಡೆದ ಕೆಲಜನರನ್ನಾರಿಸಿ ಅವರನ್ನು ಯೋಗ್ಯ ಸ್ಥಳದಲ್ಲಿ

ತರಬೇಕು ಗೊಳಿಸಬೇಕು. ಅದರಿಂದ ಧರ್ಮಪ್ರಚಾರ ಕಾರ್ಯವನ್ನು ಆರಂಭಿಸಬೇಕು. ಹೀಗೆಂದ ಕೂಡಲೆ ಕ್ಷತ್ರಿಯರಾದ ನಾವು ಈ ಕೆಲಸಮಾಡಬೇಕೆ, ಎಂದು ಕೆಲಜನ ಆಕ್ಷೇಪವೆತ್ತಬಹುದು. ಆದರೆ ಅವರಿಗೆ ನನ್ನ ಉತ್ತರವಿಷ್ಟೇ! ಕಲಾಲರ ಹಿತಕ್ಕಾಗಿ ಅವಶ್ಯ, ಅತಿ ಅವಶ್ಯ ಪಡೆಯಬೇಕು. ಬ್ರಾಹ್ಮಣರಂತೆ ದಕ್ಷಿಣೆ ಬೇಡಬೇಕೇನು ಇದು ಶಕ್ಯವಿಲ್ಲ. ಎಂದು ಮುಖ ಮುದುಡಿಸಬಹುದು. ಆದರಿಷ್ಟೇ ಅದನ್ನು ಪಡೆಯುವ ಇಚ್ಛೆ ಇಲ್ಲದಿದ್ದರೆ ಪ್ರತಿಫಲವಿಲ್ಲದೆ ಕೆಲಸಮಾಡಿ ಬಂದ ಹಣವನ್ನು ಸೂ. ಕ್ಷತ್ರಿಯ ಸಂಘಗಳಿಗೊಪ್ಪಿಸಬೇಕು. ಇದನ್ನು ಕೇಳಿ ನಮ್ಮ ಗುರುಗಳೆಂದು ಹೇಳಿಕೊಳ್ಳುವ ಮಹಾಜನರು ನಮ್ಮ ಹಕ್ಕು ಅಧಿಕಾರಗಳು ಮುಳುಗುವವೆಂದು ಕೆರಳಬಹುದು. ಆದರೆ ಅವರಿಗೆ ನನ್ನ ಬಿನ್ನಹವಿಷ್ಟೇ ನೀವು ಗುರುಗಳು ನಿಜ. ಆದರೆ ಗುರುಗಳಾದ ನೀವು ನಮಗರಿಯದಂತೆ ನಮ್ಮ ಕೊಲೆ ಮಾಡಿದ್ದೀರಿ. ಇದಕ್ಕೇನು ಹೇಳುವಿರಿ; ಇಂದು ನಾವು ಎಷ್ಟೋ ಹೀನರೂ ಹೊಲಸು ಅದವರೂ ಘೋರಕರ್ಮಚಾರಿಗಳೂ ಇದ್ದರೂ ನಾವು ನಿಮ್ಮಲ್ಲಿಟ್ಟಷ್ಟು ಭಕ್ತಿ ನಿಮ್ಮಲ್ಲಿ ಯಾರಾದರೂ ಇಟ್ಟಿರುವರೇ! ಇಂತಹ ನಂಬಿಗೆಯುಳ್ಳ ಸಭ್ಯ ಮನುಷ್ಯರು ಅರಿಯದೆ ಘೋರವಾಗಿರುವ ಕಾರ್ಯಗಳನ್ನು ಉದ್ಯೋಗಗಳೆಂದು ಕೈಕೊಳ್ಳುವಾಗ ನೀವೇನೂ ಹೇಳಲಿಲ್ಲವಲ್ಲ. ಆದರೆ ನಾವೇನು ಹೇಳಬೇಕಾಗಿತ್ತು, ನಮ್ಮ ಮಾತೇನು ನಡೆಯುತ್ತಿತ್ತು ಎನ್ನುವಿರಾ! ಆದರೆ ನಿಮ್ಮ ಮಾತು ನಡೆಯುತ್ತಿತ್ತು ಎಂದೇ ನಾನು ಇಂದು ನಮ್ಮ ಜನತೆ ನಿಮ್ಮ ಮೇಲಿಟ್ಟಿರುವ ವಿಶ್ವಾಸದಿಂದ ಹೇಳುತ್ತೇನೆ ಯಾಕೆಂದರೆ ಅವರು ಧರ್ಮಕ್ಕಾಗಿ ಎಂತಹ ಮಹಾತ್ಯಾಗವನ್ನಾದರೂ ಮಾಡುತ್ತಾರೆ. ಎಂದಮೇಲೆ ನೀವು ಆಗ ನಮ್ಮ ಜನತೆಯನ್ನು ಕರೆಸಿ ಇಕೋ ಹೀಗೆ ಮಾಡಿದರೆ ನಿಮಗೆ ನಮ್ಮ ಬಹಿಷ್ಕಾರವಿದೆ. ಎಂದು ಖಡಾಖಡಿಯಾಗಿ ಹೇಳಿದ್ದರೆ ಕಲಾಲರ ಇಂದಿನ ಪರಿಸ್ಥಿತಿಯೇ ಬೇರೆಯಾಗುತ್ತಿತ್ತು. ಎಂದಮೇಲೆ ನೀವು ಇಂದು ನಮ್ಮ ಅಧೋಗತಿಯ ಮೂಲಕಾರಣವೆಂದು ಯಾಕೆ ಹೇಳಬಾರದು; ಅಲ್ಲದೆ ಈಗ ನಮ್ಮನ್ನು ಕಂಡರೆ ಜುಗುಪ್ಸೆ ಅರಿಯದವರಿಗೆ ದಾರಿತೋರಿ ಉದ್ಧಾರಮಾಡುವದನ್ನು ಬಿಟ್ಟಿರಿ. ಆದರೆ ದಕ್ಷಿಣೆಗಾಗಿ ಮಾತ್ರ ದಂಗೆಯೆಬ್ಬಿಸಿ ವಸೂಲಮಾಡುತ್ತೀರಿ. ಎಂದಮೇಲೆ ನಿಮ್ಮನ್ನು ನಾವು ಬಿಡುವದು ನ್ಯಾಯವಾಗಿದೆಯಲ್ಲದೇ ಅದು ನಮ್ಮ ಕರ್ತವ್ಯವೂ ಆಗಿದೆ. ಆದ

ಕಾರಣ ಈ ಕೆಲಸವನ್ನು ನಾವೇ ಮಾಡಿಕೊಳ್ಳಲು ಅಖಿಲ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘವು ಒಂದು ಯೋಚನೆ ತಯಾರಿಸಿ ಅದನ್ನು ಆಚರಣೆಯಲ್ಲಿ ತರಲಿಕ್ಕೆ ಪ್ರಯತ್ನಿಸಬೇಕು. ಈ ಕಾರ್ಯದಲ್ಲಿ ತರುಣರು ಮುಂದುವರೆದು ಬಂದು ಸಹಾಯಮಾಡಬೇಕು. ಎಲ್ಲರೂ ಈ ಕಾರ್ಯ ಯಶಸ್ವಿಗೊಳಿಸಲು ಟೊಂಕಕಟ್ಟಿ ಸಿದ್ಧರಾಗಬೇಕು. ಅಂದರೆ ನಾವು ನಮ್ಮ ಧರ್ಮದಂತೆ ನಡೆಯದಿದ್ದರೂ ಧರ್ಮವೆಂದರೇನೆಂಬುದನ್ನಾದರೂ ಅರಿಯ ಬಹುದು. ಅರಿತಮೇಲೆ ಎಂದಾದರೊಂದು ದಿನವಾದರೂ ಹಾಗೆ ನಡೆಯ ಲುಪಕ್ರಮಿಸಬಹುದು. ಹೀಗೆ ಮಾಡದೆ ಉದಾಸೀನರಾದರೆ ನಮ್ಮ ಧರ್ಮದ ಉದ್ಧಾರವೆಂದರೆ ರಾತ್ರಿಯಲ್ಲಿ ಸೂರ್ಯನನ್ನು ಹುಡುಕುವಂತೆಯೇ ಸರಿ

**ವಿವಾಹದ ಬಗ್ಗೆ:—**

ಸದ್ಯದ ವಿವಾಹ ಪದ್ಧತಿಯು ನೂರಾರು ವರ್ಷಗಳನ್ನು ದಾಟಿ ಬಂದಿದೆ. ಅದನ್ನಿಂದು ಒಮ್ಮೆಲೆ ತ್ಯಜಿಸುವದೆಂದರೆ ಸ್ವಲ್ಪ ಕಠಿಣ. ಇದಕ್ಕೆ ಕಾರಣವೆಂದರೆ- ಎಲ್ಲರೂ 'ಅಜ್ಜನೆಟ್ಟ ಆಲದಮರ' ಎಂಬ ಅಭಿಮಾನ ವುಳ್ಳವರು. ಈ ಅಭಿಮಾನವು ದೂರಾಗಬೇಕಾದರೆ ನಮಗೆ ವಿದ್ಯೆಬೇಕು. ವಿದ್ಯೆ ಇದ್ದರೆ ತನ್ನ ಸಮಾಜವನ್ನು ಪರಸಮಾಜಗಳೊಡನೆ ತುಲನೆಮಾಡಿ ನೋಡಿ ತಾವೂ ಅದರಂತೆ ಸುಧಾರಿಸಬೇಕೆಂಬ ವಿಚಾರದಿಂದ ಹಾಗೆ ನಡೆ ಯಲು ಯತ್ನಿಸುವರು. ಅದಿಲ್ಲದ್ದಕ್ಕಾಗಿ ಈ ಪದ್ಧತಿಯನ್ನು ಬಿಡಬಾರ ದೆಂಬ ಆಗ್ರಹವುಳ್ಳವರೂ ಇದ್ದಾರೆ. ಈ ಪದ್ಧತಿ ಪೂರ್ಣವಾಗಿ ಹೋಗ ಬೇಕಾದರೆ ಕೆಲಕಾಲಬೇಕು ಇರಲ್ಲಿ, ವಿವಾಹಕ್ಕೆ ಈಗಿರುವ ವೆಚ್ಚ ಮತ್ತು ಮುಂದೆ ಅದನ್ನು ಪರಿವರ್ತಿಸಬೇಕಾದದ್ದು ಹಿಂದೆ ಹೇಳಿದೆ. ಆದರೆ ವಿವಾಹ ಕಾಲದ ಸಾಮಾಜಿಕ ಪದ್ಧತಿಯೊಂದನ್ನು ಇಲ್ಲಿ ಎತ್ತಿ ತೋರಿಸಿ ಹಿರಿಯರೂ ಎಂಥ ತಪ್ಪು ಮಾಡುತ್ತಾರೆ. ಇದರಿಂದ ನಾವು ಎಂಥ ಹೀನರಾಗಿದ್ದೇವೆ. ಎಂಬುದನ್ನು ಸ್ವಲ್ಪ ವಿವರಿಸುವೆನು:- ನಮ್ಮ ಸಮಾಜದಲ್ಲಿ ಲಗ್ನವಾಗುವ ವನು ತನ್ನ ಸಮಾಜಕ್ಕೆ ಒಂದು ಊಟ ಕೊಡುವ ಪದ್ಧತಿ ಇದೆ ನಿಜ ವಾಗಿ ವಿಚಾರಿಸಿದರೆ ಈ ಪದ್ಧತಿಯು ಕಟ್ಟಳೆಯಲ್ಲ. ಆದರೂ ಇದಿಂದು ಕಟ್ಟಳೆಯಾಗಿಯೇ ಪರಿಣಮಿಸಿದೆ ಆದರೆ ಆದರ ಮೂಲಕಾರಣವು ಹೀಗಿ ರಬಹುದು. ಅದೆಂದರೆ ಲಗ್ನಮಾಡಿಕೊಂಡವನು ತನ್ನ ಸಂತೋಷಕ್ಕಾಗಿ

ಹಾಗೂ ಅದರ ಸವಿನೆನವಿಗಾಗಿ ತನ್ನ ದೈವಕ್ಕೆ ಒಂದು ಊಟ ಕೊಡುತ್ತಿದ್ದನು. ಹೀಗೆ ಆ ಪದ್ಧತಿಯು ಸಾಗಿಬಂದು ಅದನ್ನೊಂದು ನಿಯಮವೆಂದು ನಮ್ಮವರು ಭಾವಿಸಿಬಿಟ್ಟಿದ್ದಾರೆ. ಮತ್ತು ವರನಿಗಾಗಲಿ, ವರ ಪಕ್ಷದ ಹಿರಿಯನಿಗಾಗಲಿ ನಮ್ಮ ಸಮಾಜದ ಸ್ಥಳಿಕ ಮುಖಂಡರು 'ನೀನು ಊಟ ಎಂದು ಕೊಡುತ್ತೀ' ಎಂದು ಕೇಳುತ್ತಾರೆ. ವರನಾಗಲೀ ಅವನ ಹಿರಿಯರಾಗಲೀ ದೈವಕ್ಕೆ ವಿನಯಪೂರ್ವಕ ತಾನಾಗಿಯೇ ಆಮಂತ್ರಣ ಕೊಡುವದಕ್ಕೆ ಪ್ರತಿಯಾಗಿ ದೈವದವರೇ ಹೀಗೆ ಕೇಳುವದು ನಾಚಿಕೆಬರುವ ಮಾತಲ್ಲವೇ? ಮತ್ತೊಂದು ಪ್ರಸಂಗ- ವೀಳ್ಯೆಯಾಗುವಾಗ ತಮ್ಮ ಪ್ರೇಮದ ಕಾಣಿಕೆಯೆಂದು ವಧುವಿಗೆ ಬೆಲೆಯುಳ್ಳ ವಸ್ತ್ರ. ಅಲಂಕಾರಗಳನ್ನು ಕೊಡುತ್ತಿದ್ದರು. ಅದು ಹಾಗೆ ಸಾಗುತ್ತ ಬಂದು ಅದೂ ಒಂದು ಪದ್ಧತಿಯಾಗಿ ಇಂದು ಈ ವಸ್ತ್ರಗಳಿಗಾಗಿ ಅನಾಗರಿಕರಂತೆ ವಧು ಪಕ್ಷದವರು ಬಡೆದಾಡುತ್ತಾರೆ. ಮುಂದೆ ಪರಸ್ಪರ ಪ್ರೀತಿಭಾವದಿಂದ ನಡೆಯುವವರು ವ್ಯರ್ಥವಾಗಿ ವೈಮನಸ್ಸುಮಾಡಿಕೊಂಡು ಅಯ್ಯೋ! ವಿಧಿಯೇ ಎಂದು ಉಸಿರೆಳೆಯುತ್ತಾರೆ. ದುರ್ದೈವವಲ್ಲವೇ ಈನಡತೆ ಇನ್ನೊಂದು ಮಾದರಿ- ಇದನ್ನು ಎಲ್ಲರೂ ಮಾಡುವದಿಲ್ಲವಾದರೂ ಅದು ಇತ್ತೀಚೆಗೆ ಕ್ರಮೇಣ ಬೆಳೆಯುತ್ತ ಬಂದಿದೆ. ಅದಕ್ಕಾಗಿ ಹೇಳಬೇಕಾಗಿದೆ. ನಮ್ಮ ಸಮಾಜದಲ್ಲಿ ಕಲಿತವರು ಸಿರಿವಂತರು ಅತಿಕಡಿಮೆ. ಕಲಿತಸಿರಿವಂತರವರು ತಾವು ಕಲಿತವರು ನವಕರದಾರರು ಶ್ರೀಮಂತರು ಸುಂದರರು ಎಂಬ ಅಭಿಮಾನದಿಂದ ಕನ್ಯಾಪಿತೃಗಳಿಂದ ಕಾಣಿಕೆಗಾಗಿ ಆಶೆಪಟ್ಟು ಲಗ್ನಕಾಲಕ್ಕೆ ಮುನಿಸಿಗೊಂಡು ಕೂಡ್ರುತ್ತಾರೆ. ಇದು ಶೋಚನೀಯವಲ್ಲವೇ? ನಿಜವಾಗಿ ವಿಚಾರಮಾಡಿದರೆ ಮನುಷ್ಯನು ತಾನು ದುಡಿದುದನ್ನು ಕೂಡ ತಿನ್ನದೆ ದೇವರಿಂದ ಪಡೆದುದನ್ನು ಮಾತ್ರ ತಿನ್ನುವನು. ಎಂದಮೇಲೆ ಪರರಿಂದ ನಾವು ಹೀಗೆ ಆಸೆ ಮಾಡುವದು ಅನ್ಯಾಯವಲ್ಲವೇ? ಅದಕ್ಕಾಗಿ ನಾವು ಸಿಟ್ಟಾಗಿ ನಗೆಗೇಡಾಗಬೇಕೇ, ಅಲ್ಲದೆ ಸಮಾಜದಲ್ಲಿ ನಾವು ಅದು ಬೇಕು ಇದುಬೇಕು ಎಂದು ಹಟಮಾಡಿದರೆ ಕೊಡುವ ಯೋಗ್ಯತೆ ಇಲ್ಲದವನಿಗೆ ಅವಮಾನವಲ್ಲವೇ, ಮತ್ತು ಮಗಳು ಮನೆಬಿಟ್ಟು ಅಗಲಿಹೋಗುವಳೆಂಬ ಮೋಹದ ತಾಪದಲ್ಲಿ ಅಳಿಯನ ಈ ನಡತೆಯಿಂದ ಮಾವನಿಗೆ ಅತೀವಖೇದದಿಂದ. ಸಂತೋಷದಿಂದ ಕಳಿಸುವದಕ್ಕೆ ಪ್ರತಿಯಾಗಿ ಪ್ಛೂ! ಎಂದು ನಿಟ್ಟುಸಿರಿನಿಂದ ಬೀಳ್ಕೊ

ಡುವನು. ಹೀಗೆ ಎರಡನೆಯವರ ಮನಸ್ಸು ದುಃಖಪಡಿಸಿ ನಮ್ಮ ಸ್ವಾರ್ಥ ಸಾಧಿಸಲೆತ್ನಿಸಿದರೆ ವಿವಾಹದಿಂದ ಸಿಗತಕ್ಕ ಸುಖವು ಸಿಗಲಾರದು. ಆದರೆ ಈ ಎಲ್ಲ ಪದ್ಧತಿಗಳಿಗೂ ಪರಿಹಾರವಿಲ್ಲವೆ, ಇದೆ. ಕೊಳಚೆನೀರು ಕೊಚ್ಚಿ ಹೋಗಬೇಕಾದರೆ ಒಂದು ಮಹಾಪ್ರವಾಹವು ಅಲ್ಲಿ ಹಾಯಬೇಕು. ಅಂದರೇನೇ ಕಲ್ಮಶವೆಲ್ಲ ಕೊಚ್ಚಿಹೋಗುವದು. ಇಂದು ಸಮಾಜದ ಹೆಸರಿನಲ್ಲಿ ನಡೆಯುವ ಕೆಲವು ವಿಡಂಬನಾತ್ಮಕ ಪದ್ಧತಿಗಳಿಗೆ ಅತ್ಯಂತ ಮೊನೆಯಾದ ದಾರಿಯಿಂದ ಎದುರಿಸಬೇಕು. ಎಂದರೆ ಸಮಾಜದ ಹೆಸರಿನಲ್ಲಿ ದುರುಪಯೋಗವಾಗುವ ಹಣಕ್ಕೆ ತರುಣರು ಬಲಾತ್ಕಾರದಿಂದ ತಡೆಯಬೇಕು. ಅದಕ್ಕಾಗಿ ಮೊದಲು ಹಿರಿಯರಿಗೆ ವಿನಯಪೂರ್ವಕವಾಗಿ ಹೇಳಬೇಕು ಅದಕ್ಕವರು ಒಪ್ಪದಿದ್ದರೆ ಉಗ್ರವಾಗಿ ಪ್ರತಿಭಟಿಸಬೇಕು. ಈ ಕಾರ್ಯವು ತರುಣರಿಂದಾಗಬೇಕಾದರೆ ಅದಕ್ಕೆ ಅರಿತ ಹಿರಿಯರ ಹರಿಕೆ ಸಹಾಯ ಸಹಕಾರಗಳುಬೇಕು. ಎಲ್ಲರೂ ಸಂಘಟಿತರಾಗಿ ಇಂಥ ಕೆಲಸಗಳನ್ನು ತೆಗೆದುಹಾಕಲು ಪ್ರಯತ್ನಿಸಬೇಕು. ಸಮಾಜದವರಾದರೂ ಇಂಥ ಪದ್ಧತಿಗಳನ್ನು ವಿರೋಧಪ್ರದರ್ಶನದ ದಾರಿಕಾಯದೆ ತ್ಯಜಿಸಬೇಕು. ಯಾಕಂದರೆ ಮೊದಲಿನಂತೆ ನಮ್ಮ ಸಮಾಜದ ಆರ್ಥಿಕ ಸ್ಥಿತಿಯು ಒಳ್ಳೆಯದಿಲ್ಲ. ಯುದ್ಧದ ಈ ಭಯಂಕರ ಬಿರುಗಾಳಿಗೆ ಅದು ಮತ್ತಷ್ಟು ಕುಗ್ಗಿ ಗಾಸಿಯಾಗಿಹೋಗಿದೆ. ಆದ್ದರಿಂದ ಸಮಾಜವು ಸದ್ಯದ ಪರಿಸ್ಥಿತಿಯನ್ನು ಪರಿಶೀಲಿಸಿ ತಮ್ಮ ಹೊಣೆಗಾರಿಕೆಯನ್ನರಿತು ತಾವು ಸುಧಾರಿಸಬೇಕಲ್ಲದೆ ಹಿಂದಿನ ಪದ್ಧತಿಗಳನ್ನೆಲ್ಲ ನಾಶಮಾಡಿ ಹೊಸ ಪದ್ಧತಿಯನ್ನು ಜಾರಿಯಲ್ಲಿ ತರಬೇಕಾದುದು ಅವಶ್ಯವಾಗಿದೆ ಒಟ್ಟಿನಮೇಲೆ ಸಮಾಜವು ಎಚ್ಚತ್ತು ತರುಣರೊಡನೆ ತಜ್ಞರೊಡನೆ ಸಹಕರಿಸಿ ಹೊಸಕಟ್ಟಳೆಗಳನ್ನು ಮಾಡಿ ಎಲ್ಲರಿಗೂ ಅನುಕೂಲ ಲಾಭಕರ ಹರ್ಷಹೆಚ್ಚುವಂತೆ ಮಾಡಬೇಕು. ಅಂದರೆ ಮಾತ್ರ ನಮ್ಮ ಸಮಾಜದ ಸುಖ, ಶಾಂತಿ, ಉದ್ಧಾರ ಇಲ್ಲದಿದ್ದರೆ ಅದೊಂದು ಆಕಾಶಕುಸುಮ ಕೊನೆಯಮಾತು- ನಮ್ಮಲ್ಲಿ ವಿಧವಾ ವಿವಾಹ ಪದ್ಧತಿಯಿಲ್ಲ. ಆಕಸ್ಮಾತ್ತಾಗಿ ಅದರ ಬಗ್ಗೆ ಯಾರಾದರೂ ಬಾಯಿತಪ್ಪಿ ನುಡಿದರೂ ಆ ಪಾಖಂಡಿಯನ್ನು ಬಾಯಿಮುಚ್ಚಿಸಿರೋ ಎಂದು ಕೂಗೆಬ್ಬಿಸುತ್ತಾರೆ. ಆದರೆ ಇಂದು ಕೆಲವರು ಆದರಲ್ಲಿಯೂ ಅರಿತವರು ಹಿರಿಯರೂ ಆದಕ್ಕೆ ಗೊತ್ತಾಗದಂತೆ ದಾರಿಮಾಡಿಕೊಡುತ್ತಿದ್ದಾರೆ. ಎಂದರೆ ಇದೀಗ ಅಲ್ಲಿಇಲ್ಲಿ. ಒಂದೊಂದು

ವೃದ್ಧ ಕುಮಾರಿ ವಿವಾಹಗಳನ್ನು ಜರುಗಿಸಿಹತ್ತಿದ್ದಾರೆ. ಇದು ನಮ್ಮ ಸಮಾಜದ ಪ್ರಮುಖರೆಂಬವರು ಮುಂದೆ ಬಂದು ಈ ಕೆಲಸ ಜರುಗಿಸುತ್ತಿದ್ದಾರೆಂಬರೆ ಅವರ ದೊಡ್ಡಿಸ್ತಿಕೆ. ಹಿರಿತನಗಳ ದಿವಾಳಿಯೇ ಸೈ. ಅಲ್ಲದೆ ಇದರಿಂದ ಸಮಾಜದಲ್ಲಿ ಕೋಳಿಬೆಳೆಯುತ್ತದೆ. ತರುಣಿಯರು ಅದೇ ತಾರುಣ್ಯಾವಸ್ಥೆಗೆ ಬಂದಿರುತ್ತಾರೆ. ವೃದ್ಧರು ಜೀವನ ನಿವೃತ್ತಾವಸ್ಥೆಗೆ ಪ್ರವೇಶಿಸುತ್ತಾರೆ. ಮೇಲೆ ಲಗ್ನ ಆಶಿಸುತ್ತಾರೆ. ಇದರ ಪರಿಣಾಮವು ಬಹಿರಂಗದಲ್ಲಾಗದಿದ್ದರೂ ತೆರೆಯಮರೆಯಲ್ಲಿ ಭಯಾನಕವಾಗುತ್ತದೆಂಬದು ನಿರ್ವಿವಾದವಾದದ್ದು. ಆದಕ್ಕಾಗಿ ನಮ್ಮ ಸಮಾಜವು ಇಂಥ ವಿಷಮವಿವಾಹಗಳಾಗದಂತೆ ಜಾಗ್ರತೆಯಿಂದರಬೇಕಲ್ಲದೆ ಹಾಗೆ ಆಗಲು ಬಯಸುವವರಿಗೆ ಬಲವಾದ ಪೆಟ್ಟುಹಾಕಲು ಸಿದ್ಧವಾಗಬೇಕು. ಹಾಗೆ ಮಾಡದೆ ಸುಮ್ಮನಿದ್ದರೆ ನಮಗರಿಯದಂತೇ ವಿಧವಾ ವಿವಾಹವು ಬಳಿಕೆಯಲ್ಲಿ ಬರುತ್ತದೆ. ಸಮಾಜದ ಪವಿತ್ರತೆ ಸಂಸ್ಕೃತಿಗಳು ನಾಶವಾಗುತ್ತವೆ. ಇಂಥ ಅತೃಪ್ತ ತಂದೆತಾಯಿಗಳಿಂದ ಹುಟ್ಟುವ ಸಂತತಿಯು ಸಮಾಜದಲ್ಲಿ ಏನನ್ನು ಸಾಧಿಸುತ್ತದೆ. ಅದಕ್ಕಾಗಿ ಹಿರಿಯರು ಕಿರಿಯರು ಪಂಡಿತರು ಶ್ರೀಮಂತರು ಬಡವರು ಮುಂದಾಳುಗಳು ಸಾಮಾನ್ಯರು ಎಲ್ಲರಿಗೂ ಈ ಮಾತಿನತ್ತ ಲಕ್ಷ್ಯ ಹಾಕಲು ನನ್ನ ನಮ್ರವಾದ ಸೂಚನೆ. ಇಲ್ಲವಾದರೆ ವಿಧವಾ ವಿವಾಹವನ್ನು ಬಳಿಕೆಯಲ್ಲಿ ತರುವದು ಲೇಸು. ಯಾಕಂದರೆ ಅದು ಈ ವಂಚಕ ವಿಷಮ ವಿವಾಹಕ್ಕಿಂತ ಸಾವಿರಪಾಲ ಒಳ್ಳೇದು.

**ರಾಜಕಾರಣ:—**

ಕಲಾಲರು ತಮ್ಮ ಉನ್ನತಿಗಾಗಿ ರಾಜಕಾರಣದಲ್ಲಿ ಪ್ರವೇಶಿಸಬೇಕು ಎಂದರೆ ಕಾಂಗ್ರೆಸ್ಸಿನಲ್ಲಿದ್ದು ಸೇವೆಮಾಡಬೇಕು. ಎಂದು ಹೇಳಿದೆಯಷ್ಟೇ ಆದರೆ ಸದ್ಯದ ಪರಿಸ್ಥಿತಿಯನ್ನು ಕಂಡು ಎಲ್ಲರನ್ನೂ ಕಾಂಗ್ರೆಸ್ಸು ಸೇರಿರಿ ಎಂದು ಹೇಳಿ ಜೈಲಿಗಟ್ಟುವವಿಚಾರವಿದು. ಎಂದು ಗಾಬರಿಯಿಂದ ಬಾಯಿ ತೆರೆಯಬಹುದು. ಆದರೆ ಕಾಂಗ್ರೆಸ್ಸು ಅಂತಹ ಹೀನವಾದ ದುಷ್ಟವಿಚರದ ಸಂಕುಚಿತ ಧೋರಣವ ಸಂಸ್ಥೆಯಲ್ಲ; ಅದು ನಮ್ಮಂತಹ ದೀನ ದ ದ್ರ ನಾಲ್ವತ್ತುಕೋಟಿ ಹಿಂದೀಯರ ಹಿತಕ್ಕಾಗಿ ಸರಕಾರದೊಡನೆ ಅ ಶ್ರಾಂತವಾಗಿ ಹೋರಾಡುತ್ತಿದೆ. ಈಗಿನಂತೆಯೇ ಅದಕ್ಕೆ ಈ ಹಿಂದೆ ಅನೇ

ಸಲ ಜೈಲನ್ನನುಭವಿಸುವ ಪ್ರಸಂಗಬಂದು ಅನುಭವಿಸಿದೆ. ಆದರೆ ಪ್ರತಿ ಸಲವೂ ತನ್ನ ಉಚ್ಚೈರ್ಧ್ಯೇಯದಿಂದಾಗಿ ಹೆಚ್ಚುಹೆಚ್ಚು ಯೋಗ್ಯತೆಗಳಿಸಿ ಇಂದು ಹಿಂದೀ ಸ್ವಾತಂತ್ರ್ಯಕ್ಕಾಗಿ ಹೋರಾಟಸಾಗಿಸಿದೆ. ಕೊನೆಗೆ ಅದು ಜೈಲಿನಿಂದ ಜಯಶಾಲಿಯಾಗಿಯೇ ಹೊರಬರುತ್ತದೆ, ಸಧ್ಯದ ಈ ಸಂಕಟವು ಹೇಗಿದೆಯೆಂದರೆ- ಅತ್ಯಂತ ಬಲಶಾಲಿ ಭಾಗ್ಯಶಾಲಿಯಾದ ಸುಪುತ್ರನನ್ನು ಪಡೆಯುವಾಗ ತಾಯಿಗಾಗುವ ಪ್ರಸವವೇದನೆಯಂತಿದೆ. ಈ ಜೈಲುವಾಸ ಎಂದಾದರೂ ಒಂದುದಿನ ಸರಕಾರವು ಕಾಂಗ್ರೆಸ್ಸಿನೊಡನೆ ತಪ್ಪದೆ ಒಪ್ಪಂದಮಾಡಿಕೊಳ್ಳುವದು. ಆದ್ದರಿಂದ ಅದು ದುಷ್ಟ ಹೇತುವಿನ ಸಂಸ್ಥೆಯಲ್ಲ. ದೀನರಿಗಾಗಿ ದುಡಿಯುವ ಸಂಸ್ಥೆ. ಹೀನರಾದ ಕಲಾಲರು ತಮ್ಮಂತಹ ದೀನ ದರಿದ್ರರ ಸೇವೆಮಾಡುವ ಸಂಸ್ಥೆಯನ್ನು ಸೇರಿದಾಗಲೇ ಅಲ್ಲವೆ, ನಮ್ಮ ಉದ್ಧಾರ.

ಇದಲ್ಲದೆ ಇಂದು ಕಾಂಗ್ರೆಸ್ಸು ಸರಕಾರ ದ್ರೋಹಿಯೆಂದು ಸೆರೆಮನೆ ಸೇರಿದ್ದರೆ ಅದೇ ಕಾಂಗ್ರೆಸ್ಸು ಗಡಿನಾಡು ಪ್ರಾಂತದಲ್ಲಿ ಮಂತ್ರಿಪದವಿಯನ್ನು ಸ್ವೀಕರಿಸಿ ರಾಜ್ಯಭಾರಮಾಡುತ್ತದೆ. ಯಾವ ಸಂಸ್ಥೆಯು ಸರಕಾರದ ದ್ರೋಹಿಯೋ ಅದೇ ಸಂಸ್ಥೆಯು ಅದೇ ಸರಕಾರದ ಒಂದು ಪ್ರಾಂತದಲ್ಲಿ ಮಂತ್ರಿಪದವಿಯಲ್ಲಿದೆ. ಈ ಪರಸ್ಪರ ನೋಟದಿಂದ ತಿಳಿಯುವದೇನು? ಬ್ರಿಟಿಶರು ತಮ್ಮ ಹಿತಕ್ಕಾಗಿ ಬಡಿದಾಡುತ್ತಾರೆ. ಕಾಂಗ್ರೆಸ್ಸು ಸಕಲ ಹಿಂದೀಯರ ಹಿತಕ್ಕಾಗಿ ಹೋರಾಡುತ್ತದೆ. ಅದಕ್ಕಾಗಿ ಈ ಘರ್ಷಣೆಯಲ್ಲದೆ ಮತ್ತಿನ್ನೇನೂ ಇಲ್ಲ. ಆದ್ದರಿಂದ ಇಂದು ಪ್ರತಿಯೊಬ್ಬ ಸೂರ್ಯವಂಶ ಕ್ಷತ್ರಿಯನು ಕಾಂಗ್ರೆಸ್ಸನ್ನು ಸೇರಿ ಮಹಾತ್ಮರ ಹೇಳಿಕೆಯಂತೆ ವಿಧಾಯಕ ಕಾರ್ಯದಲ್ಲಿ ತೊಡಗಬೇಕು. ನಮ್ಮಿಂದ ಏನೂ ಮಾಡುವದು ಶಕ್ಯವಿಲ್ಲ ಎಂದು ನಿರಾಶರಾಗಿ ಕೂಡದೆ ತಾವಲ್ಲದಿದ್ದರೂ ತಮ್ಮ ಮನೆಯಲ್ಲಿ ಮಹಿಳೆಯರಿಗೆ ನೂಲು ತೆಗೆಯಲಿಕ್ಕೆ ಹಚ್ಚಬೇಕು. ಇದು ಪ್ರತಿಯೊಬ್ಬ ಕಲಾಲನ ಇಂದಿನ ಆದ್ಯ ಕರ್ತವ್ಯವಾಗಿದೆ. ಈ ವಿಚಾರವು ಕಾಂಗ್ರೆಸ್ಸು ಜೈಲಿನಲ್ಲಿದ್ದಾಗ ಬರೆದುದ್ದಾಗಿದೆ.

**ಏಕೀಕರಣ ವಿಷಯದಲ್ಲಿ:—**

ಹಿಂದೊಮ್ಮೆ ನಮ್ಮ ಕನ್ನಡನಾಡು ಎಲ್ಲೆಲ್ಲೂ ತನ್ನ ಕೀರ್ತಿ ಪತಾಕೆ

ಯನ್ನು ಮೆರೆಯಿಸಿತ್ತು. ಆದರೆ ಇಂದು ಅನೇಕ ಆಳಿಕೆಗೊಳಗಾಗಿ ಅತ್ಯಂತ ಹೀನಾವಸ್ಥೆಯಲ್ಲಿದೆ. ಅದನ್ನೊಂದುಗೂಡಿಸದೆ ಕನ್ನಡಿಗರ ಉದ್ಧಾರವಿಲ್ಲ. ಆದ್ದರಿಂದ ಸರಕಾರದೊಡನೆ ನಡೆಯಿಸಿದ ಕರ್ನಾಟಕ ಏಕೀಕರಣ ಪ್ರಯತ್ನದಲ್ಲಿ ನಾವು ಸೇರಿಕೊಳ್ಳಬೇಕು. ಯಾಕಂದರೆ ಕಲಾಲರು ಇಂದು ಕನ್ನಡಿಗರಾಗಿದ್ದಾರೆ. ಕನ್ನಡಿಗರಾದ ಕಲಾಲರು ತಮ್ಮ ತಾಯಿಯಾದ ಕನ್ನಡ ತಾಯಿಯನ್ನು ಸರ್ವಾಂಗ ಸುಂದರ ಮಾಡಲು ಹೋರಾಡಬೇಕು. ಎಂದರೆಯೇ ಮುಂದಿನ ನಮಗಾಗಿ ಕಾದಿರುವದಿನಗಳಲ್ಲಿ ನಮಗೆ ಸುಖದಪಾಲು.

ಇಷ್ಟೇ ಅಲ್ಲದೆ ನಮ್ಮ ಸಮಸ್ಯೆಗಳು ಇನ್ನೂ ಅನೇಕವಿವೆ. ಅವು ಬರೆದಂತೆ ಬೆಳೆಯುತ್ತಲೇ ಹೋಗುತ್ತವೆ. ಆದರೆ ಸಧ್ಯಕ್ಕೆ ಮುಖ್ಯವಾಗಿರುವ ಸಮಸ್ಯೆಗಳನ್ನಷ್ಟೇ ಇಲ್ಲಿ ಎತ್ತಿ ತೋರಿಸಿದೆ. ಪ್ರತಿಯೊಂದು ಸಮಸ್ಯೆ ಪರಿಹಾರದಲ್ಲೂ ಕರ್ನಾಟಕ ಸೂರ್ಯವಂಶ ಕ್ಷತ್ರಿಯ [ಕಲಘಟಗಿ] ಸಂಘದ ಹೊಣೆಯು ಹೆಚ್ಚಿನದಾಗಿದೆ ಆದ್ದರಿಂದ ಅದು ತನ್ನ ಕುಂಭಕರ್ಣನಿದ್ರೆಯಿಂದ ಎಚ್ಚತ್ತು ಕಾರ್ಯಮಾಡಲು ಆರಂಭಿಸಬೇಕು. ಅಂದರೇನೇ ಕಲಾಲರ ಪ್ರಗತಿಗಾಗಿ ಆಶೆ. ಇಲ್ಲವಾದರೆ ಬರಿಯೆಬರಡು. ಈ ಸಂಘವು ಮುಂದೆ ಮಾಡಬೇಕಾಗಿರುವ ಕೆಲಸಗಳೇನೆಂಬುದನ್ನು ಮುಂದಿನ ಪ್ರಕರಣದಲ್ಲಿ ನಿರೀಕ್ಷಿಸುವಾ.

---

# ಹೊಸ ನೋಟ

ಈ ಕ್ಷತ್ರಿಯರು ಕೇವಲ ಧರ್ಮರಕ್ಷಣೆಗಾಗಿ ಎಲ್ಲ ಸುಖಗಳನ್ನು ಬಿಟ್ಟು ತಮ್ಮ ಧ್ಯೇಯಕ್ಕೆ ಜಯವಾಗುವದೆಂಬ ಆತ್ಮವಿಶ್ವಾಸದಿಂದ ತಮ್ಮ ನಾದನ್ನು ಬಿಟ್ಟು ಬಂದರು. ದಾರಿಯಲ್ಲಿ ಅವರಿಗೆ ಅನೇಕ ತೊಡರುಗಳುಂಟಾದರೂ ಲೆಕ್ಕಿಸದೆ ತಮ್ಮ ನಿಶ್ಚಯಕ್ಕೆ ಅಂಟಿಕೊಂಡರು. ಆದರೆ ಅದಕ್ಕಿಂತಲೂ ಹೆಚ್ಚಾದ ಕಷ್ಟಗಳು ಅವರಿಗಾಗಿ ಕಾದಿದ್ದವು. ಒಮ್ಮೆಲೇ ಅವರಿಗೆ ಮಾನಸಿಕ ಶೋಕವು ಮುತ್ತಿದರೂ ಆ ನೋವಿನಿಂದ ಅವರು ಬಳಲದೆ ತಮ್ಮ ವಿಶ್ವಾಸವನ್ನು ಬೆಳಿಸಿಕೊಂಡರು. ಆ ನಂಬಿಗೆಯ ಬಲದಿಂದಲೇ ಕರ್ನಾಟಕವನ್ನು ತಲ್ಪಿದರು.

ದಕ್ಷಿಣ ಭಾರತದಲ್ಲೇ ಕನ್ನಡನಾಡು ಅತ್ಯಂತ ಧರ್ಮಾಭಿಮಾನದ್ದೆಂದು ಕನ್ನಡಿಗರು ತಮ್ಮ ಮೊರೆಬಂದವರನ್ನು ತಮ್ಮ ಜೀವಕೊಟ್ಟಾದರೂ ಉಳಿಸಿಕೊಳ್ಳುವರೆಂಬುದನ್ನು ಇವರು ಕೇಳಿದ್ದರು. ಆದರಂತೆ ಅಲ್ಲಲ್ಲಿ ಅಲೆದಾಡಿ ಕೊನೆಗೆ ಕನ್ನಡಿಗರ ಆಶ್ರಯವನ್ನು ಹೊಂದಿದರು. ಕಾಲಚಕ್ರದ ಪ್ರಭಾವಕ್ಕೆ ಸಿಕ್ಕು ಮುಂದೆ ಕನ್ನಡ ರಾಜ್ಯಗಳು ಅಳಿದವು. ಜೊತೆಯಲ್ಲೇ ಇವರ ಉನ್ನತಿಯ ಆಶೆ ಮಣ್ಣುಗೂಡಿತು. ಅಂದಿನಿಂದಲೂ ಇವರ ಜೀವನ ದುಃಖಪೂರಿತವಾಗಿದೆ. 'ಎಲ್ಲಾರು ಮಾಡ್ವದು ಹೊಟ್ಟೆಗಾಗಿ' ಎಂದು ಹೊಟ್ಟೆ ಹೊರಿಯಲು ಮಧ್ಯಮಾರಾಟದ ಉದ್ಯಮವನ್ನು ಕೈಕೊಂಡರು. ಪರಸ್ಪರರನ್ನು ವಂಚಿಸಿದರು. ಅಂತಃಕಲಹಗಳಾದವು. ಒಬ್ಬರೊಳಗಿದ್ದ ವಿಶ್ವಾಸವನ್ನು ಕಳೆದುಕೊಂಡು ತಮ್ಮನ್ನು ತಾವೇ ನಂಬದಾದರು. ಕಾಲವು

ಇನ್ನೂ ಇವರನ್ನೆರಗಿ ತನ್ನ ಪಾಶವೀ ವೃತ್ತಿಯ ಸೇಡುತೀರಿಸಿಕೊಂಡಿತು. ಕನ್ನಡನಾಡನ್ನಾಳಿದ ಮುಸಲ್ಮಾನರು ತಮ್ಮ ಧರ್ಮಪ್ರಚಾರಕ್ಕಾಗಿ ತೋರಿದ ಪ್ರಭಾವವನ್ನು ಇವರಮೇಲೂ ಪ್ರಯೋಗಿಸಿದರು. ನಿಶ್ಚಲವಾದ ಆತ್ಮಾಭಿಮಾನದ ಮುಂದೆ ಆ ಬಲವು ಕುಸಿದುಬಿದ್ದಿತು. ಆದರೆ ಆ ಭಯಾನಕ ಸಂಕಟವನ್ನೆದುರಿಸಿ ವಿಜಯಿಗಳಾದರೂ ಇವರ ಪವಿತ್ರತೆಯನ್ನು ಸ್ವಬಾಂಧವರೇ ಮೆಟ್ಟಿ ಗೋರಿಗೊಳಿಸಿದರು. ತಮ್ಮ ಸಮಾಜದಿಂದ ಬೇರೆ ಎಂದು ಹೊರದೂಡಿದರು. ಅಂದಿನಿಂದಲೇ ನಮ್ಮಲ್ಲಿ ಹಿಂದು ಕಲಾಲ, ಮುಸ್ಲಿಂ ಕಲಾಲರೆಂದು ಎರಡು ಪಂಗಡಗಳಾದವು. ಮುಂದೆ ಪರಸ್ಪರರು ದುರಭಿಮಾನ ದ್ವೇಷ ಅಸೂಯೆಗಳಿಗೊಳಗಾಗಿ ಬಡೆದಾಡಹತ್ತಿ ಸಾಮಾಜಿಕ ಜೀವದ ಮಹತ್ವವನ್ನು ಮರೆತು ಹಣಕ್ಕಾಗಿ ಬೇಕಾದುದನ್ನು ಮಾಡಲು ಸಿದ್ಧರಾದರು. ಇಂಥ ಪರಿಸ್ಥಿತಿಯಲ್ಲೂ ಇವರಿಗೆ ದುರ್ದೈವವು ತನ್ನ ಕೊಡಲಿಏಟನ್ನು ಹಾಕಿಬಿಟ್ಟಿತು. ಅದೆಂಪರೆ ಬ್ರಿಟಿಶ ಸರಕಾರವು ಆರಂಭಿಸಿದ ಮದ್ಯದಂಗಡಿಗಳ ಮಾರಾಟದ ಕಾಯದೆ. ಈ ಕಾಯಿದೆಯಿಂದಾಗಿ ಇವರ ದ್ವೇಷಾಸೂಯೆಗಳು ಹೆಚ್ಚಿದರ ಪರಿಣಾಮದಿಂದ ಪರಕೀಯರು ಕಂಪನಿಗಳನ್ನು ಕಟ್ಟಿಕೊಂಡು ಇವರಿಗೆದುರಾದರು ಇವರ ಅರ್ಥಿಕ ಪರಿಸ್ಥಿತಿಯಲ್ಲಿ ಆಗ ಅಲ್ಲೋಲಕಲ್ಲೋಲವಾಗಿ ಇವರು ಬಡತನದ ಮಹಾಕೂಪದಲ್ಲಿ ಬಿದ್ದುಬಿಟ್ಟರು. ಅಂದಿನಿಂದ ಇವರ ಧ್ಯೇಯ ಯೋಗ್ಯತೆಗಳು ಗಾಳಿಗೆ ಸಿಕ್ಕ ಮೋಡದಂತೆ ಹರಿದು ಹಂಚಿ ಹೋದವು ಇವರ ಆಗಿನ ಜೀವನವೆಂದರೆ ಅದೊಂದು ಕರುಣ ಕಥೆ. ಅಡ್ಡದಾರಿ ಹಿಡಿದು ಬಿಟ್ಟರು. ದುರ್ಮಾರ್ಗವು ಇವರನ್ನು ಎತ್ತಲೋ ಒಯ್ದು ಕಟುಕತನವನ್ನಾರಂಭಿಸಹಚ್ಚಿತು. ಅಂದಿನಿಂದ ಇವರ ಉನ್ನತಿಗೆ ಆಶೆಯಿಲ್ಲ. ಹೊಟ್ಟೆತುಂಬಿಕೊಳ್ಳಲು ಪೂರ್ವ ಕರ್ನಾಟಕಕ್ಕೆ ಹೋದರು. ಅಲ್ಲಿಯವರೂ ತಮ್ಮ ಕೆಲಸವಾದೊಡನೆ ಇವರ ಕೈ ಬಿಟ್ಟರು. ಆಗ ಮತ್ತೆ ಬೇರೆ ಉದ್ಯೋಗ ಆರಂಭಿಸಿದರು. ಅದೆಂದರೆ ಚಾಕಣಾ ವಿಕ್ರಿಯ ಇದನ್ನು ಕಂಡು ಮದ್ಯಮಾರಾಟದ ಕ್ಷತ್ರಿಯರು ಇವರನ್ನು ಊಟದೊಡವೆ ಮಾರುವವರು ಎಂದು ನಮ್ಮ ಸಮಾಜದಿಂದ ಕಿತ್ತೊಗೆದರು. ದಕ್ಷಿಣಸಂಸ್ಥಾನಗಳಲ್ಲಿ ಕೆಲವರು ಹೊಟ್ಟೆಹೊರೆಯುವದಕ್ಕೆ ಹೋಗಿ ಅಲ್ಲಿಯ ಪರಿಸ್ಥಿತಿಗೆ ಸಿಕ್ಕು ವಿಧವಾ ವಿವಾಹ ಆರಂಭಿಸಿದರು. ಇದರಿಂದ ಎಲ್ಲರೂ ಅವರ ಮೇಲೆ ಕಿಡಿಕಾರಿ ಧರ್ಮದ ಕೊಲೆಗಾರರು. ಎಂದು ತಳ್ಳಿ

ಹಾಕಿದರು. ಆದರೆ ಅವರು ತಮ್ಮನ್ನು ಬಾಹಿರರನ್ನಾಗಿ ಮಾಡಿದರೂ ಪರ ಕೀಯ ಧರ್ಮದ ಪ್ರಚಾರ ಪ್ರಭಾವಗಳಿಗೊಳಗಾಗದೆ ಸ್ವಾಭಿಮಾನದಿಂದ ತಮಗೆ ಜಯಸಿಗುವದೆಂಬ ಶ್ರದ್ಧೆಯಿಂದ ಕ್ಷತ್ರಿಯರಾಗಿಯೇ ಉಳಿದಿದ್ದಾರೆ. ಅಂದಿನ ಸ್ವಾಭಿಮಾನಿ ಕ್ಷತ್ರಿಯರು ಇಂದು ನಿರಭಿಮಾನಿ ಕಲಾಲರಾಗಿದ್ದಾರೆ. ಕೆಲ ಮಹಾನುಭಾವರು ಇವರ ಹೀನ ಸ್ಥಿತಿಯನ್ನು ಕಂಡು ಕರುಣೆಯಿಂದ ಇವರ ಉನ್ನತಿಗಾಗಿ ಹೋರಾಡಿದರು ಆದರೇನು ಪ್ರಗತಿಗಾಗಿ ಆಶೆಯುಳ್ಳ ವರು. ಕಾಲನ ಕರಾಳದವಡೆಗೆ ತುತ್ತಾದರು. ಉಳಿದವರು ಆರ್ಥಿಕದುಸ್ಥಿ ತಿಗೆ ಈಡಾಗಿ ಪ್ರಾರಂಭಿಸಿದ ಕೆಲಸವನ್ನು ನಿಲ್ಲಿಸಿಬಿಟ್ಟರು. ಅವರ ತರು ವಾಯ ಅದನ್ನು ಸಾಗಿಸಿಕೊಂಡು ಹೋಗಲು ಯಾರೂ ಮುಂದೆಬಾರದೆ ಹಾಗೆ ನಿಂತುಬಿಟ್ಟಿದೆ. ಆದರೆ ಇದೀಗ ಕಾಲವುಪರಿವರ್ತನೆಯಾಗಿ ಜಗತ್ತೇ ಮಹಾಕ್ರಾಂತಿಗೆ ಒಳಗಾಗಿದ್ದರ ಪರಿಣಾಮವು ಇವರಮೇಲೆ ಪೂರ್ಣವಾಗಿ ದ್ದರೂ ಸ್ವಲ್ಪಾದರೂ ಆಗಿ ಮತ್ತೆ ನಿಂತುಹೋದ ಆ ಮಹಾಕಾರ್ಯವನ್ನು ಪ್ರಾರಂಭಿಸಬೇಕೆಂದು ಪ್ರತಿಯೊಬ್ಬರೂ ಬಯಸುತ್ತಿದ್ದಾರೆ. ಬೇರೆ ಬೇರೆ ಸಮಾಜಗಳು ಸಂಘಟನೆಯಿಂದಾಗಿ ತಮ್ಮ ಉನ್ನತಿಯನ್ನು ಸಾಧಿಸುತ್ತಿ ರುವದನ್ನು ನೋಡಿ ಇವರಿಗೂ ತಮ್ಮ ದೀನತೆಯ ಕಲ್ಪನೆ ಬಂದು ತಾವೂ ಏನು ಮಾಡಬೇಕು? ಯಾರು ತಮ್ಮ ಕೈಹಿಡಿದು ಕರೆದೊಯ್ದಾರು ಬಸ ವಣ್ಣನಂಥ ಮಹಾಪುರುಷರು ನಮ್ಮ ಸಮಾಜದಲ್ಲಿ ಉದಯಿಸಬಾರದೇ? ಎಂದು ಕನವರಿಸುತ್ತಿದ್ದಾರೆ. ಇದೀಗ ಅಲ್ಲಲ್ಲಿ ಚಿಕ್ಕ ಚಿಕ್ಕ ಸಂಸ್ಥೆಗಳು ಆರಂಭಿಸಲ್ಪಟ್ಟು ತಮಗೆ ತಿಳಿದಂತೆ ಸಾವಕಾಶವಾಗಿ ತಮ್ಮಿಂದಾದಷ್ಟು ಕೆಲ ಸ ಆರಂಭಿಸಿವೆ. ಆದ್ದರಿಂದ ಈ ಪ್ರಸಂಗದಲ್ಲಿ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘದವರು ತಮ್ಮ ದೀರ್ಘನಿದ್ರೆಯಿಂದೆದ್ದು ಕಾರ್ಯಾರಂಭಮಾ ಡಬೇಕು. ಹುರುಪಿನ ತರುಣರನ್ನು ಆದರಿಸಿ ಕರೆದು ಪ್ರೋತ್ಸಾಹಿಸಿ ಅವ ರಿಂದ ಕೆಲಸಮಾಡಹಚ್ಚಬೇಕು.

ಈ ಸಂಘವೇ ಮತ್ತೆ ಕಾರ್ಯಪ್ರವೃತ್ತವಾಗಬೇಕೆಂದು ಹೇಳುವ ಕಾರಣವೇನಂದರೆ- ಅದು ಈ ಹಿಂದೆ ಸರಕಾರ ಮತ್ತು ಇತರ ಸಮಾಜಗ ಳಲ್ಲಿ ತನ್ನ ಪ್ರಭಾವತೋರಿಸಿದೆ ಅಲ್ಲದೆ ಅದು ಪ್ರಗತಿಪರ ವಿಚಾರಗಳ ನ್ನಿಟ್ಟುಕೊಂಡು ವಿಶಾಲತತ್ವಗಳಿಂದ ಸಾಗಿದೆ. ಕಾರಣ ಈಗಿರುವ ಆ ಸಂಘ

ದ ಕಾರ್ಯಕಾರೀ ಮಂಡಲದವರು ಒಂದುಗೂಡಿ ಪುತ್ತೆ ಸಂಘದ ಕೆಲಸಕ್ಕೆ ಆರಂಭಿಸಬೇಕು. ಇದೀಗ ಅವರ ಮುಖ್ಯ ಕಾರ್ಯವೆಂದರೆ ಒಂದು ಮಹಾ ಅಧಿವೇಶನವನ್ನು ರೈಲು, ಮೋಟಾರುಗಳ ಅನುಕೂಲವಿದ್ದ ಕೇಂದ್ರದಲ್ಲಿ ಮತ್ತು ನಮ್ಮ ಸಮಾಜದ ಬಹುಸಂಖ್ಯಾಕರಿರುವೆಡೆಯಲ್ಲಿ ಕರೆಯಬೇಕು ಕರ್ನಾಟಕದಲ್ಲಿ ಬಹುಸಂಖ್ಯಾಕ ಕಲಾಲರಿರುವ ಮಧ್ಯವರ್ತಿಯಾಗಿರುವ ಪಟ್ಟಣವೆಂದರೆ ಹುಬ್ಬಳ್ಳಿಯೇ ಎಂದು ಹೇಳಬಹುದು. ಆದ್ದರಿಂದ ಹುಬ್ಬಳ್ಳಿಯಲ್ಲಿ ಅಖಿಲ ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಮಹಾಧಿವೇಶನವನ್ನು ಕರೆಯಬೇಕಾದುದು ಅಗತ್ಯವಾಗಿದೆ ಈ ಕಾರ್ಯದಲ್ಲಿ ಹುಬ್ಬಳ್ಳಿ ಸಮಾಜದವರು ತನುಮನಧನಗಳಿಂದ ಸಹಾಯಸಲ್ಲಿಸಬೇಕಾದುದು ಅವರ ಕರ್ತವ್ಯವಾಗಿದೆ ಪರಿಷತ್ತಿನ ಪ್ರಚಾರಕಾರ್ಯಕ್ಕೆ ಕರ್ನಾಟಕ ಸೂರ್ಯವಂಶ ಕ್ಷತ್ರಿ ಸಂಘದಲ್ಲಿ ಸಾವಿರಾರು ರೂಪಾಯಿ ಹಣಕೂಡ ಶಿಲ್ಕು ಇವೆ ಪರಿಷತ್ತು ಈ ಕೆಳಗಿನ ವಿಷಯಗಳನ್ನು ಅವಶ್ಯ ವಿಚಾರಿಸಿ ಒಂದು ನಿರ್ಧಾರಕ್ಕೆ ಬಂದು ಕೆಲಸ ಆರಂಭಿಸಬೇಕು.

೧ ಸಂಘದ ಮುಖ್ಯ ಕಚೇರಿಯನ್ನು ಕಲಘಟಗಿಯಿಂದ ಸ್ಥಳಾಂತರಿಸುವದು. ೨ ಕೆಲಸಮಾಡುವ ಮತ್ತು ಹುರುಪಿನ ಜನರನ್ನು ಕಾರ್ಯಕಾರೀ ಮಂಡಳದಲ್ಲಿ ಆರಿಸುವದು. ೩ ಸಂಘದ ಶಾಖಾ ಸಂಸ್ಥೆ ಅಧೀನಸಂಸ್ಥೆ ಎಂದರೆ ಜಿಲ್ಹಾ ತಾಲೂಕ ಗ್ರೂಪ ಸ್ಥಾನಿಕ ಸಂಸ್ಥೆಗಳನ್ನು ಆರಂಭಿಸುವದು. ೪ ಕಲಾಲರ ಎಂದರೆ ಸೂರ್ಯವಂಶ ಕ್ಷತ್ರಿಯರ ಜನಸಂಖ್ಯೆ ಎಷ್ಟಿದೆ ಎಂಬುದನ್ನು ನಿರ್ದಿಷ್ಟಮಾಡುವದು. ೫ ಪಂಗಡಗಳ ಏಕೀಕರಣದ ಬಗ್ಗೆ ಗದಗ ಮಹಾಸಭೆಯಲ್ಲಿ ಎದ್ದ ಪ್ರಶ್ನೆಯನ್ನು ಪುನರ್ವಿಚಾರಿಸಿ ನಿಶ್ಚಿತ ಧೋರಣಕ್ಕೆ ಬರುವದು. ೬ ಕಲಾಲ ವಿದ್ಯಾರ್ಥಿಗಳ ಸಂಖ್ಯೆಯನ್ನು ಹೆಚ್ಚಿಸುವ ಧೋರಣ ಕೈಕೊಳ್ಳುವದು. ಮತ್ತು ಮಾಧ್ಯಮಿಕ ಉಚ್ಚ ಔದ್ಯೋಗಿಕ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗಾಗಿ ಒಂದು ಬೋರ್ಡಿಂಗನ್ನು ಎಲ್ಲಿ ಸ್ಥಾಪಿಸಬೇಕು. ಮತ್ತು ಅವಕ್ಕೆ ಬೇಕಾಗುವ ಧನಸಂಚಯಕ್ಕಾಗಿ ಯಾವ ಮಾರ್ಗ ಕೈಕೊಳ್ಳಬೇಕೆಂಬುವದನ್ನು ವಿಚಾರಿಸಿ ಧನಸಂಗ್ರಹಕ್ಕೆ ಪ್ರಾರಂಭಿಸುವದು. ೭ ಸ್ತ್ರೀ ಶಿಕ್ಷಣದ ಬಗ್ಗೆ ಚರ್ಚಿಸುವದು. ೮ ಕಲಾಲರ ಔದ್ಯೋಗಿಕ ಉನ್ನತಿಗಾಗಿ ಒಂದು ಬ್ಯಾಂಕು ಸ್ಥಾಪಿಸುವ ಬಗ್ಗೆ ವಿಚಾರಮಾಡ

ವದು. ಮತ್ತು ಆರ್ಥಿಕ ದಿವಾಳಿಯಾಗದಂಥ ಉದ್ಯಮಗಳಾವವೆಂಬುದನ್ನು ವಿಚಾರಿಸಿ ಪರಸ್ಪರ ಸಹಕಾರದಿಂದ ಆರಂಭಿಸುವ ಬಗ್ಗೆ ವಿಚಾರಮಾಡು ವದು. ೯ ಸ್ತ್ರೀಯರಿಂದ ಮನೆಯಲ್ಲಿ ಪೂರಕ ಉದ್ಯೋಗವೆಂದರೆ ನೂಲು ವದನ್ನು ಪ್ರಾರಂಭಿಸಬೇಕು. ೧೦ ಧಾರ್ಮಿಕ ಸಂಸ್ಥೆಯನ್ನು ಆಧುನಿಕ ವಿಚಾರಗಳಿಂದ ಸಂಸ್ಥಾಪಿಸಿ ಅದರ ಭಾವೀ ಆಡಳಿತದ ಯೋಜನೆಯನ್ನು ರೂಪಿಸಿ ಅದಕ್ಕೆ ತಕ್ಕ ಆಡಳಿತಗಾರರನ್ನು ನಿಯಮಿಸಿ ಕೆಲಸಗಾರರಿಗೆ ಯೋಗ್ಯ ತರಬೇತಿಗೊಳಿಸಿ ಪರಕೀಯರನ್ನೇ ಅವಲಂಬಿಸದೆ ಧರ್ಮಕಾರ್ಯ ದರ್ಮಪ್ರಚಾರವನ್ನು ಪ್ರಾರಂಭಿಸುವದು ೧೧ ವಿವಾಹ ಪದ್ಧತಿಯನ್ನು ಬದಲಾಯಿಸಿ ವೆಚ್ಚವಿಲ್ಲದೆ ಹೊಸ ಪದ್ಧತಿಯನ್ನು ಆರಂಭಿಸುವದು. ಮತ್ತು ವಿಷಮ ವಿವಾಹಗಳಿಗೆ ಅನುವುಇಲ್ಲದಂತೆ ಮಾಡುವದು, ೧೨ ಇದೀಗ ಕೆಲವರ ವಿಚಾರದಲ್ಲಿ ಸುಳಿದಾಡುವ ವಿಧವಾ ವಿವಾಹದ ಬಗ್ಗೆ ಸಾರ್ವತ್ರಿಕ ವಿಚಾರಮಾಡಿ ಆಬಗ್ಗೆ ಮುಂದೇನು, ಎಂಬ ಬಗ್ಗೆ ವಿಸ್ತೃತ ವಿಚಾರಮಾಡಿ ಜನಾಭಿಪ್ರಾಯವನ್ನು ತಿಳಿಯುವದಕ್ಕಾಗಿ ಒಂದು ಮಂಡಲವನ್ನು ನಿಯ ಮಿಸುವದು ೧೩ ನಮ್ಮ ಬಾಲಕರಿಗೆ ಶಾರೀರಿಕ ಚಟುವಟಿಕೆಗಳನು ಹೆಚ್ಚಿಸಿ ದೇಹಸಾಮರ್ಥ್ಯವನ್ನು ಬೆಳಿಸುವಬಗ್ಗೆ ಒಂದು ದಾರಿಹುಡುಕುವದು. ೧೪ ಸಂಸ್ಥೆಗಳು ಮತ್ತು ಬೋರ್ಡಿಂಗುಗಳು ನಡೆಯುವದಕ್ಕಾಗಿ ವಂತಿಗೆ ದೇಣಿಗೆಗಳ ಮತ್ತು ಉತ್ಪನ್ನಬೆಳೆಯಿಸುವ ಯೋಜನೆ ಮಾಡುವದು. ೧೫ ನಮ್ಮ ಸಮಾಜದ ಪ್ರಗತಿಗಾಗಿ ಬರೆಯುವ ಸಾಹಿತಿಗಳನ್ನು ಪ್ರೋತ್ಸಾಹಿಸಿ ಅವರಿಂದ ಗ್ರಂಥ ಬರೆಯಿಸಿ ಪ್ರಕಟಿಸುವದು. ೧೬ ಸಮಾಜದ ಐಕ್ಯಕ್ಕಾಗಿ ಉನ್ನತಿಗಾಗಿ ಸದಭಿಮಾನವನ್ನು ಹುಟ್ಟಿಸುವಂಥ ಒಂದು ಮಾಸಪತ್ರಿಕೆ ಯನು ಆರಂಭಿಸುವ ಬಗ್ಗೆ ಯೋಚಿಸುವದು. ೧೭ ರಾಜಕೀಯ ಹಕ್ಕುಗ ಳನ್ನು ಪಡೆಯುವದಕ್ಕಾಗಿ ಕಾಂಗ್ರೆಸ್ಸಿನಲ್ಲಿ ಸೇರಿ ಸಹಕರಿಸುವದು. ೧೮ ಕರ್ನಾಟಕ ಏಕೀಕರಣಕ್ಕೆ ನಮ್ಮ ಬೆಂಬಲ ಸೂಚಿಸಿ ಅವರೊಡನೆ ಕೂಡಿ ಕೊಂಡು ಕೆಲಸಮಾಡುವದು. ೧೯ ನಮ್ಮ ಹಿತಗಳ ವಿಚಾರಮಾಡುವ ದಕ್ಕಾಗಿ ಕಾಂಗ್ರೆಸ್ಸು ಮತ್ತು ಸರಕಾರಗಳಿಗೆ ಒತ್ತಾಯಮಾಡುವದು. ೨೦ ಇನ್ನೂ ಉಳಿದ ವಿಷಯಗಳು.

-ಈ ಎಲ್ಲ ವಿಷಯಗಳನ್ನು ವಿಚಾರಿಸಿ ಒಂದು ನಿಶ್ಚಿತ ಧೋರಣೆಕ್ಕೆ

ಕೊಂಡು ಕರ್ನಾಟಕ ಸೂರ್ಯವಂಶ ಕ್ಷತ್ರಿಯ ಸಂಘವು ಮತ್ತೇ ಕಾರ್ಯರಂಗ ಕ್ಕಿಳಿಯಬೇಕು. ಈ ಕೆಲಸ ಮಾಡುವದಕ್ಕಾಗಿ ಒಂದು ಅನುಕೂಲ ಸ್ಥಳ ದಲ್ಲಿ ಈ ಸಂಘವು ತನ್ನ ಕಾರ್ಯಕಾರೀ ಮಂಡಳವನ್ನು ಕರೆದು ವಿಚಾರ ಕೈಕೊಳ್ಳಬೇಕು. ಈ ಕೆಲಸಮಾಡುವದಕ್ಕಾಗಿ ಸಂಘದ ಕಾರ್ಯಕಾರಿ ಸಮಿ ತಿಮೆಂಬರರಿಗೆ ಪ್ರತಿಯೊಬ್ಬರೂ ನಿಖರದ ಒತ್ತಾಯಮಾಡಬೇಕು. ಈ ವಿಷಯದಲ್ಲಿ ಹುಬ್ಬಳ್ಳಿ ಸೂರ್ಯವಂಶ ಕ್ಷತ್ರಿ ಎಂದರೆ ಕಲಾಲ ಸಮಾಜದ ವರು ಪ್ರತಿಯೊಂದು ಬಗೆಯಿಂದ ಸಹಾಯಮಾಡಲು ಸಿದ್ಧರಾಗಬೇಕು. ಅಂದರೆನೇ ನಮ್ಮ ಪ್ರಗತಿಯು ಭರಭರ ಹೆಜ್ಜೆಗಳನ್ನಿಕ್ಕುತ್ತ ಮುಂದೆ ಸಾಗು ವದು. ಈ ಸಕಲ ಯೋಜನೆಗಳ ಭಾವೀ ನೋಟದಲ್ಲಿ ಬೆರೆತು ನಮ್ಮ ಹಿರಿಯರು ತರುಣರು ಉತ್ಸಾಹದಿಂದ ಮುಂದೆ ಬಂದು ಕಾರ್ಯರಂಗಕ್ಕೆ ಧುಮುಕಿ ನಮ್ಮ ಸಮಾಜದ ನಿಶ್ಚಿತ ಪ್ರಗತಿಗಾಗಿ ಪ್ರಯತ್ನಿಸುವರೋ?



# ಶೇಷಾಚಲ ಗ್ರಂಥಮಾಲೆಯ ಪುಸ್ತಕಗಳು

| | ರೂ. | ಆ. |
|---|---|---|
| ಅಲ್ಲಾಹೋಅಕಬರ | ೦ | ೧೦ |
| ಅಡವಿಟ್ಟ ಸಿಪಾಯಿ | ೦ | ೬ |
| ಅಮಾತ್ಯ ರಾಕ್ಷಸ | ೦ | ೬ |
| ಆತ್ಮಬಲಿ | | |
| ಈಶಸಂಕಲ್ಪ | ೦ | ೧೪ |
| ಎಚ್ಚಮನಾಯಕ | ೦ | ೧೨ |
| ಕುಣಿಕ್ಯಾ | ೨ | ೦ |
| ಗಣಪತಿ ಸಪ್ತಾಂಗಹರಣ | ೧ | ೪ |
| ಚಾಲುಕ್ಯರ ಅಭ್ಯುದಯ | ೧ | ೦ |
| ಚೋದ್ಯಪುರದ ಚೋಜಿಗ | ೨ | ೦ |
| ಜಕಣಾಚಾರ್ಯ [ರಾಯ] | | |
| ತಾಯಿನಾಡು | | |
| ದಳವಾಯಿ ಸಾತನಾಮಿ | ೦ | ೪ |
| ನರವೀರ ಕಾಸಿಮ | ೧ | ೪ |
| ನೇತಾಜಿ | | |
| ಪತಿತೋದ್ಧರಣ | ೦ | ೪ |
| ಪ್ರಾಣದಾನ | ೦ | ೩ |
| ಮಂದಾಕಿನಿ | ೨ | ೦ |
| ಸತಿ ಸೀಮಂತಿನಿ | ೦ | ೩ |
| ಪರಮೇಶ್ವರ | ೦ | ೬ |
| ಪರಿಣಾಮ | ೧ | ೪ |
| ಫಿರಂಗಿಗಳ ಉತ್ಪಾತ | ೧ | ೦ |
| ಬಲಿದಾನ | ೧ | ೪ |
| ಮಾತೃಭೂಮಿಗಾಗಿ | ೦ | ೩ |
| ರಕ್ತಸಿಂಚನ | ೦ | ೨ |
| ರಾಣೀಕುರಂಗಿ | ೦ | ೬ |
| ರಾಣೀ ಅರುಣಕುಮಾರಿ | ೧ | ೦ |
| ವಡಗಾಂವದ ವಿಜಯ | ೧ | ೦ |
| ಕಾಳಗದಲ್ಲಿ ಬಾಳು | ೧ | ೪ |
| ಚಂದ್ರಕಾಂತ | ೦ | ೧೨ |
| ಜಯಪರಾಜಯ | | |

| | ರೂ. | ಆ. |
|---|---|---|
| ವಿಮಲಾ | | |
| ವೀರಕಾಂತಾ | ೦ | ೧೦ |
| ವೀರಕುಮಾರಿ ಕನಕಲತೆ | ೦ | ೩ |
| ವೀರರಾಜ ವಿಜಯ | ೦ | ೧೨ |
| ಶಕ್ತಿಮಯಿ | ೧ | ೦ |
| ಸಿರಾಜ ಉದ್ದೌಲ | ೧ | ೮ |
| ಸ್ವಾದೀನ ಜೀವನ | ೨ | ೮ |
| ಸೂರ್ಯಾಸ್ತ | ೦ | ೧೨ |
| ಸೂರ್ಯಗ್ರಹಣ | ೦ | ೧೨ |
| ಸ್ವರಾಜ್ಯಸೋಪಾನ | | |
| ಹಂಸಾ | ೧ | ೪ |
| ಹಿಂದೂ ಮುಸಲ್ಮಾನರ ಐಕ್ಯಂ | | ೩ |

## ಪತ್ತೇದಾರಿ ಕಾದಂಬರಿಗಳು

| | ರೂ. | ಆ. |
|---|---|---|
| ಅಂಬಿಕೆ | ೧ | ೮ |
| ಕೃತಕ ಕೈಬೆರಳು | ೧ | ೮ |
| ನಿಗೂಢ ಕೊಲೆ | | |
| ನನ್ನ ಗತಿ | ೦ | ೧೨ |
| ಪತ್ತೇದಾರಿ ನರಸಿಂಗರಾಯ | | |
| ಫಿರಂಗಿಯ ಪ್ರತಿಹಿಂಸೆ | ೧ | ೪ |
| ಭಯಂಕರ ಕೊಲೆ | ೦ | ೧೨ |
| ಮಾಯಾವತಿ | ೨ | ೮ |
| ರಾಜಕೀಯ ಗುಪ್ತರಹಸ್ಯ | | |
| ವಿಚಿತ್ರ ಚಟ | ೦ | ೧೨ |
| ವಿಲಕ್ಷಣ ಸಾಹಸ | ೦ | ೮ |
| ಹಗೆ | ೧ | ೪ |

## ಸಾಮಾಜಿಕ ಕಾದಂಬರಿ

| | ರೂ. | ಆ. |
|---|---|---|
| ಅಪರಾಜಿತ | ೦ | ೬ |
| ಕರಿನೀರು | ೩ | ೪ |
| ನಾರಾಯಣ ಮಹಾರಾಜ | ೦ | ೪ |
| ನಾಗಲಿಂಗಪ್ಪನವರು | ೦ | ೨ |
| ಸಂತತುಕಾರಾಮ | ೧ | ೦ |

| | ರೂ. | ಆ. | | ರೂ. | ಆ. |
|---|---|---|---|---|---|
| ನೀಚ ಇನಾಮದಾರ | ೦ | ೧೨ | ಬೆಳಧಡಿ ಬ್ರಹ್ಮಾನಂದರು | ೦ | ೨ |
| ನನ್ನ ಗೃಹಿಣಿ | ೦ | ೧೨ | ಶ್ರೀ ಬ್ರಹ್ಮೇಂದ್ರಸ್ವಾಮಿ | ೦ | ೪ |
| ಪರಿವರ್ತನೆ | ೦ | ೪ | ಮರಾಟರೂ-ಇಂಗ್ಲೀಷರೂ | ೨ | ೦ |
| ಬಂಧುಪ್ರೇಮ | ೦ | ೮ | ಮಡಿವಾಳಪ್ಪನವರು | ೦ | ೮ |
| ಭಾಮಿನಿ | ೦ | ೮ | ಸಮರ್ಥ ರಾಮದಾಸರು | ೧ | ೨ |
| ಭಾವಭಿನ್ನತೆ | ೦ | ೨ | ರಂಗನಾಥಸ್ವಾಮಿ | ೦ | ೫ |
| ಮಣಿ | ೦ | ೬ | ಶ್ರೀ ರಾಘವೇಂದ್ರ ವಿಜಯ | ೨ | ೮ |
| ಮಹಾತ್ಮಾ | ೦ | ೩ | ಶ್ರೀ ಪಾದರಾಜ ಕಥಾಮೃತ | ೦ | ೧೨ |
| ಯೋಗಾಯೋಗ | ೧ | ೮ | ಶ್ರೀಶೇಷಾಚಲ ಸಾಧು(ಪದ್ಯ) | ೦ | ೧೦ |
| ರಾಜನಂದಿನಿ | ೦ | ೮ | ಸೌರಾಷ್ಟ್ರ | ೦ | ೫ |
| ರಾಕಾಚಂದ್ರ | ೦ | ೮ | ಜ ಸುರೇಶ್ವರಾಚಾರ್ಯರು | ೦ | ೧೨ |
| ವಿಲಕ್ಷಣ ಪತಿಸೇವೆ | ೦ | ೪ | ಜ್ಞಾನೇಶ್ವರರು | ೦ | ೮ |
| ಸೌಭಾಗ್ಯ ತಿಲಕ | ೧ | ೦ | **ನಾಟಕಗಳು** | | |
| ಸತೀಸಾಹಸ | ೦ | ೭ | ಆಚಾರ್ಯಮಗಳು | ೦ | ೬ |
| ಸ್ತ್ರೀಯರಹಕ್ಕುಬಾಧ್ಯತೆಗಳು | ೧ | ೦ | ಜಲಂಧರ | ೦ | ೮ |
| ಸಾಧನ ಕುಟೀರ | | | ದೇವ-ದಾನವರು | ೦ | ೧೨ |
| ಸ್ವರ್ಗ-ನರಕ | | | ನಿರ್ಭಾಗ್ಯಭಾರತಿ | ೦ | ೬ |
| ಶ್ರೀಃ | ೦ | ೩ | ನಾರದಲೀಲಾ | ೦ | ೮ |
| ಸತೀಸುಕನ್ಯೆ | ೧ | ೪ | ಸಳನೀ-ವಿಜಯ | ೧ | [illegible] |
| **ಚರಿತ್ರೆಗಳು** | | | ಪನ್ನೆ | ೦ | ೧[illegible] |
| ಶ್ರೀ ಏಕನಾಥ ಚರಿತ್ರೆ | ೧ | ೦ | ಮೋಜಿನ ಮರಣ | ೦ | ೧[illegible] |
| ಕನಕಮಹಿಮಾದರ್ಶ | ೦ | ೮ | **ಪಾರಮಾರ್ಥಿಕ-ಇತರ** | | |
| ಗುಜರಾಥದ ಇತಿಹಾಸ | ೦ | ೬ | ಅವಿವಾಹಿತರ ಸಮಸ್ಯೆ | ೧ | [illegible] |
| ಟೆಂಬೆಮಹಾರಾಜರು | ೦ | ೧೦ | ಆನಂದರಾಮಾಯಣ | ೨ | [illegible] |
| ನಾರಾಯಣ ಭಗವಾನರು | ೦ | ೮ | ದಿನಕರರಾಮದಾಸಏಲಗೀತೆ | ೦ | [illegible] |
| ಕ. ಕಥಾಸರಿತ್ಸಾಗರ | ೨ | ೮ | ಕರ್ನಾಟಕಕ್ಕೆ ದೇವತೆಗಳು | ೦ | ೧[illegible] |
| ಮಡಿ-ಮೈಲಿಗೆಗಳ ಗುಟ್ಟು | ೦ | ೪ | ಜ್ವರ ಪ್ರಕರಣ | ೧ | [illegible] |
| ಮಲ್ಲಾರಿ ಮಹಾತ್ಮ್ಯೆ | ೦ | ೮ | ಧರ್ಮಸಿಂಧು | ೧ | |
| ರೇಣುಕಾ ಮಹಾತ್ಮ್ಯೆ | ೦ | ೪ | ಮಿತ್ರದುಃಖ | ೦ | |
| ವೆಂಕಟೇಶ ಮಹಾತ್ಮ್ಯೆ | ೦ | ೮ | ಕಾಣ್ವನಿತ್ಯವಿಧಿ | ೧ | |

ದೊರೆಯುವ ಸ್ಥಳ:— ಬಿ. ಪಿ. ಕಾಳೆ

ಶ್ರೀ ಶೇಷಾಚಲ ಪ್ರೆಸ್ಸ ಮದಿಹಾಳ ಧಾರವಾಡ.